# ಬಿಡುಗಡೆಯ ಬೆಳ್ಳಿ

ಡಾಕ್ಟರ್ ಎಚ್. ವಿ. ಶ್ರೀನಿವಾಸಮೂರ್ತಿ ಎಂ.ಎ., ಪಿ.ಎಚ್‌ಡಿ.
ಇತಿಹಾಸ ಇಲಾಖೆ, ಬೆಂಗಳೂರು ವಿಶ್ವವಿದ್ಯಾಲಯ

ಪ್ರೊಫೆಸರ್ ಎಸ್. ಆರ್. ಮಳಗಿ
ನಿವೃತ್ತ ಪ್ರಿನ್ಸಿಪಾಲ್ - ಲಾಲ್‌ಬಹದೂರ್ ಕಾಲೇಜ್

ಎನ್. ಎಸ್. ಸೀತಾರಾಮಶಾಸ್ತ್ರಿ
ಮಾಜಿ ಸಂಪಾದಕ-ಕನ್ನಡ ಪ್ರಭ, ಜನಪ್ರಗತಿ, ಗೋಕುಲ

ಹಿಮಾಂಶು–ಬೆಂಗಳೂರು

ಭಾರತಸ್ವಾತಂತ್ರ್ಯದ ಬೆಳ್ಳಿಹಬ್ಬಕ್ಕಾಗಿ ಈ ಗ್ರಂಥವನ್ನು ವಿರಚಿಸಿ, ಪ್ರಕಟಿಸಲಾಗಿದೆ. ಬ್ರಿಟಿಷರನ್ನು ಭಾರತದಿಂದ ತೊಲಗಿಸಲು ಭಾರತೀಯರು ನಡೆಸಿದ ಸಮರಗಳ, ಕ್ರಾಂತಿಗಳ ಹಾಗೂ ಚಳವಳಿಗಳ ಇತಿಹಾಸವನ್ನು ಈ ಗ್ರಂಥ ನಿರೂಪಿಸಿದೆ. ಈ ಇಪ್ಪತ್ತೈದು ವರ್ಷಗಳಲ್ಲಿ ಸ್ವತಂತ್ರ ಭಾರತದ ಸಾಧನೆಯನ್ನೂ ಈ ಪುಸ್ತಕ ಒಳಗೊಳ್ಳುತ್ತದೆ. ಕರ್ನಾಟಕದ ಸಮರ, ಸಾಧನೆಗಳ ಬಗೆಗೆ ಸಾಕಷ್ಟು ಪ್ರಾಮುಖ್ಯತೆ ಕೊಡಲಾಗಿದೆ.

ಭಾರತ ಇನ್ನೆಂದೂ ವಿದೇಶೀಯರಿಗೆ ಅಡಿಯಾಳಾಗದಿರುವಂತೆ ಒಗ್ಗಟ್ಟಿನಿಂದ ಇರೋಣ, ಸುಭದ್ರ ಸಂಪದ್ಭರಿತ ಭಾರತ ನಿರ್ಮಾಣಕ್ಕೆ ಶ್ರಮಿಸೋಣ, ಎಂಬ ಆಶಯ ಓದುಗರ ಮನಸ್ಸಿನಲ್ಲಿ ಮೂಡುವಂತೆ ಎಸಗುವುದೇ ಈ ಪ್ರಕಟನೆಯ ಉದ್ದೇಶ.

## ರಾಜ್ಯಪಾಲ ಶ್ರೀ ಸುಖಾಡಿಯಾರವರ
## ಹಾರೈಕೆ :

ಹೆಸರಾಂತ ಲೇಖಕರು ವಿರಚಿಸಿದ 'ಬಿಡುಗಡೆಯ ಬೆಳ್ಳಿ' ಯನ್ನು ನೀವು ಹೊರತರುವುದನ್ನು ತಿಳಿದು ಸಂತೋಷ. ಈ ಪ್ರಕಾಶನದ ಯಶಸ್ಸಿಗಾಗಿ ಶುಭಾಶಯಗಳು.

# ಮುಖ್ಯಮಂತ್ರಿಯವರ ಸಂದೇಶ

ಭಾರತದ ಸ್ವಾತಂತ್ರ್ಯಸಮರ, ಇದರಲ್ಲಿ ಮೈಸೂರಿನ ಪಾತ್ರ; ಈ ಕಾಲು ಶತಮಾನದಲ್ಲಿ ಸ್ವತಂತ್ರಭಾರತ ಹಾಗು ಮೈಸೂರಿನ ಮುನ್ನಡೆ—ಇವನ್ನು ಕುರಿತಾಗಿ 'ಬಿಡುಗಡೆಯ ಬೆಳ್ಳಿ' ಪುಸ್ತಕವನ್ನು ಹೊರತರುವುದನ್ನು ತಿಳಿದು ನಾನು ಹರ್ಷಿತನಾದೆ. ಗತವರ್ಷಗಳ ಸ್ವಾತಂತ್ರ್ಯ-ಯೋಧರನ್ನು ಪುಳಕಿತಗೊಳಿಸಿದ ತ್ಯಾಗ, ಸಮರ್ಪಣ ಭಾವಗಳನ್ನು ನಾಡಿನ ಯುವಜನರಲ್ಲಿ ಇಂದು ತುಂಬಲೂ, ಸಂಪದ್ಭರಿತ ಪ್ರಗತಿಶೀಲ ಭಾರತದ ನಿರ್ಮಾಣಕ್ಕಾಗಿ ನಾವೆಲ್ಲ ಒಕ್ಕೂಡಿ ಶ್ರಮಿಸಲೂ ಇಂಥ ಪುಸ್ತಕಗಳ ಪ್ರಚೋದನೆ ಅತಿ ಅವಶ್ಯವಾಗಿದೆ.

—**ಡಿ. ದೇವರಾಜ ಅರಸು**

# ಬೆಳ್ಳಿಹಬ್ಬದ ಪ್ರಮಾಣ ವಚನ

ಭಾರತವು ತನ್ನ ಘನತೆಯನ್ನು ಕೀಳಾಗಿಸಿ, ಯಾವ ರಾಷ್ಟ್ರಕ್ಕೂ-ಅದು ಎಷ್ಟೇ ಪ್ರಬಲವಾಗಿದ್ದರೂ-ಮಣಿಯುವುದಿಲ್ಲವೆಂದು ಶ್ರೀಮತಿ ಗಾಂಧಿಯವರು ಜಗತ್ತಿಗೆ ತೋರಿಸಿಕೊಟ್ಟಿದ್ದಾರೆ. ಭಾರತವು ಗಾಂಧೀಜಿ ಬೋಧಿಸಿದ ಶಾಂತಿ ಮಂತ್ರವನ್ನು ಪ್ರತಿಪಾದಿಸುವುದು ಅಶಕ್ತತೆಯಿಂದಲ್ಲವೆಂಬ ಅರಿವನ್ನು ಜಗತ್ತಿನ ಪ್ರಬಲ ರಾಷ್ಟ್ರಗಳಲ್ಲಿ ಶ್ರೀಮತಿ ಗಾಂಧಿಯವರು ಮೂಡಿಸಿದ್ದಾರೆ. ಏಷ್ಯದಲ್ಲಿ ಶ್ರೀಮತಿ ಗಾಂಧಿಯವರ ನೇತೃತ್ವದಲ್ಲಿ ಭಾರತ ಧೀರ, ಗಂಭೀರ ಹೆಜ್ಜೆಗಳನ್ನಿಡುತ್ತ ಮುಂದುವರಿಯುತ್ತಿದೆ; ಅಲ್ಲಗಳೆಯಬಹುದಾದ ರಾಷ್ಟ್ರವಲ್ಲವೆಂಬುದು ಮುಂದುವರಿದ ರಾಷ್ಟ್ರಗಳಿಗೆ ಮನವರಿಕೆಯಾಗತೊಡಗಿದೆ. ಶ್ರೀಮತಿ ಗಾಂಧಿಯವರು ಭಾರತೀಯರಲ್ಲಿ ಎಂದಿಲ್ಲದ ಆತ್ಮವಿಶ್ವಾಸ ಹುಟ್ಟಿಸಿದ್ದಾರೆ. ರಾಷ್ಟ್ರವನ್ನು ಪ್ರಗತಿಪಥದಲ್ಲಿ ಕೊಂಡೊಯ್ಯುತ್ತಿದ್ದಾರೆ. ಈ ಬೆಳ್ಳಿಹಬ್ಬದ ಪುಣ್ಯದಿನದಂದು ದೇಶಸೇವೆಯ ಪವಿತ್ರಕಾರ್ಯಕ್ಕಾಗಿ ನಮ್ಮ ಜೀವನವನ್ನು ಮುಡುಪಾಗಿಡುತ್ತೇವೆಂಬ ಪ್ರಮಾಣ ವಚನವನ್ನು ಪುನಃ ಸ್ವೀಕರಿಸೋಣ! ಶ್ರೀಮತಿ ಇಂದಿರಾ ಗಾಂಧಿಯವರ ಅಪ್ರತಿಮ ನಾಯಕತ್ವದಲ್ಲಿ ಒಗ್ಗಟ್ಟಾಗಿ ನಿಂತು, ದೇಶದ ಮತ್ತಷ್ಟು ಪ್ರಗತಿಗೆ ಶ್ರಮಿಸುತ್ತೇವೆಂಬ ಪಣ ತೊಡೋಣ! ಭಾರತ ಸ್ವಾತಂತ್ರ್ಯ ಚಿರಾಯುವಾಗಲಿ! ನಮ್ಮ ಬಾಳು ಹಸನಾಗಲಿ!

ಜೈ ಹಿಂದ್!

ಜೈ ಕರ್ನಾಟಕ!

# ಭಾರತ ಸಂವಿಧಾನ

## ಪ್ರಸ್ತಾವನೆ

ಭಾರತದ ಪ್ರಜೆಗಳಾಗಿರುವ ನಾವು—ಭಾರತವನ್ನು ಸಾರ್ವಭೌಮ ಪ್ರಜಾಗಣತಂತ್ರ ರಾಷ್ಟ್ರವನ್ನಾಗಿ ಸಂಘಟಿಸುವ ಘನೋದ್ದೇಶದಿಂದ ಗಂಭೀರ ರೀತಿಯಲ್ಲಿ ನಿರ್ಣಯವನ್ನು ಸ್ವೀಕರಿಸಿ, ಭಾರತದ ಎಲ್ಲ ನಾಗರಿಕರಿಗೆ ಈ ಜೀವನ ಮೌಲ್ಯಗಳು ದೊರೆಯುವಂತೆ ಸಂಕಲ್ಪತೊಟ್ಟಿದ್ದೇವೆ:—

**ನ್ಯಾಯ** : ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ.

**ಸ್ವಾತಂತ್ರ್ಯ** : ವಿಚಾರ, ಅಭಿವ್ಯಕ್ತಿ, ನಂಬುಗೆ, ಶ್ರದ್ಧೆ ಮತ್ತು ಪೂಜಾವಿಧಿಗಳಲ್ಲಿ.

**ಸಮತೆ** : ಸ್ಥಾನ-ಮಾನ ಮತ್ತು ಅವಕಾಶಗಳಲ್ಲಿ.

**ಭ್ರಾತೃತ್ವ** : ವ್ಯಕ್ತಿಗೌರವ ಹಾಗೂ ರಾಷ್ಟ್ರೈಕ್ಯಗಳ ಆಶ್ವಾಸವೀಯಬಲ್ಲದು.

ಇದೇ ದಿನಾಂಕ ೨೬ನೆಯ ನವೆಂಬರ್ ೧೯೪೯ರಂದು, ನಮ್ಮೀ ಸಂವಿಧಾನ ರಚನಾಸಭೆಯಲ್ಲಿ ಈ ಸಂವಿಧಾನವನ್ನು ಅಂಗೀಕರಿಸಿ, ಶಾಸನಬದ್ಧಗೊಳಿಸಿ ನಮಗೇ ಕೊಟ್ಟುಕೊಳ್ಳುತ್ತೇವೆ.

# ವಿಷಯ ಸೂಚಿ

# ಬಿಡುಗಡೆ

೧೯೪೭ನೆಯ ಇಸವಿ ಆಗಸ್ಟ್ ತಿಂಗಳ ೧೪ನೆಯ ದಿನಾಂಕದ ಸಮರಾತ್ರಿ. ದೆಹಲಿಯ ಪಾರ್ಲಿಮೆಂಟ್ ಭವನದ ಸುತ್ತಮುತ್ತ ಲಕ್ಷಾಂತರ ಜನ ನೆರೆದಿದ್ದಾರೆ. ಉತ್ಸಾಹದ ಗುಜುಗುಜು. ಉಲ್ಲಸದ ಸಡಗರ. ಶಂಖಗಳ ನಿನಾದ ಮಧ್ಯರಾತ್ರಿ ಕಳೆದು, ಭಾರತ ದಾಸ್ಯದಿಂದ ಸ್ವಾತಂತ್ರ್ಯಕ್ಕೆ ಕಾಲಿಟ್ಟುದನ್ನು ನಿರ್ದೇಶಿಸಿತು. ಜನಸಮೂಹ ನವೋತ್ಸಾಹದಿಂದ ಮೇಲ್ದನಿಯಲ್ಲಿ ಜಯಕಾರ ಮಾಡಿತು.

ಪಾರ್ಲಿಮೆಂಟ್‌ನ ಸಂವಿಧಾನ ಸಭಾಂಗಣದಲ್ಲಿ ಜನತೆಯಿಂದ ಆಯ್ಕೆಗೊಂಡ ಸಂವಿಧಾನ ಸಭಾಸದಸ್ಯರು ನೆರೆದಿದ್ದಾರೆ. ಭಾರತದ ಮಹಾಮಹಾ ನಾಯಕರು ಅಲ್ಲಿ ಕಂಡುಬರುತ್ತಿದ್ದಾರೆ.

ಅಗೋ, ಜವಾಹರ್‌ಲಾಲ್ ನೆಹರೂ! ಕಂದು ಬಣ್ಣದ ಉಣ್ಣೆಯ ಷರ್ವಾಣಿ, ಬಿಳಿಯ ಸಲ್ವಾರ್ ತೊಟ್ಟಿದ್ದಾರೆ. ತಲೆಗೆ ಬಿಳಿಯ ಟೋಪಿ. ಕೇದಿಗೆಯಂತಹ ಆಕರ್ಷಕ ಮೈಬಣ್ಣ. ನೋಡಿದೊಡನೆಯೆ ಅಪರೂಪದ ವಿಶೇಷ ವ್ಯಕ್ತಿ ಎಂಬ ಭಾವನೆಯನ್ನುಂಟುಮಾಡುವುದು. ಹೊರಗಿನ ನಿಲುವಿನಲ್ಲಿ ಮಾತ್ರವಲ್ಲ, ಭಾರತದ ಸ್ವಾತಂತ್ರ್ಯ ಚಳವಳಿಯಲ್ಲೂ ಅವರು ಅಪರೂಪದ ವಿಶೇಷ ವ್ಯಕ್ತಿ. ವೈಭವ ಸಂಪನ್ನವಾದ ಶ್ರೀಮಂತ ಜೀವನವನ್ನು ಕಡೆಗಣಿಸಿ, ಬ್ರಿಟಿಷ್ ದಬ್ಬಾಳಿಕೆಗಾರರ ಲಾಠಿ ಏಟಿಗೆ ಗುರಿಯಾದವರು; ಬ್ರಿಟಿಷ್ ಸಾಮ್ರಾಜ್ಯಷಾಹಿಯನ್ನು ಭಾರತದಿಂದ ಕಿತ್ತೊಗೆಯಲು ಹವಣಿಸಿದ್ದಕ್ಕಾಗಿ, ಸೆರೆಮನೆಯಲ್ಲಿ ಹತ್ತು ವರ್ಷಕ್ಕೂ ಹೆಚ್ಚಾಗಿ ನರಳಿದವರು. ಭಾರತೀಯ ಜನತೆಯ ಕಣ್ಮಣಿ. ರಾಷ್ಟ್ರಪಿತ ಗಾಂಧಿಯವರ ರಾಜಕೀಯ ಉತ್ತರಾಧಿಕಾರಿ.

ಬಿಡುಗಡೆಯ ಬೆಳ್ಳಿ

ಮತ್ತಲ್ಲಿ ನಿಂತವರು ಸರ್ದಾರ್ ವಲ್ಲಭಭಾಯಿ ಪಟೇಲ್. ಭಾರತದ ಉಕ್ಕಿನ ಮನುಷ್ಯ. ವಲ್ಲಭಭಾಯಿ ಪಟೇಲ್ ಎಂದರೆ ಎದುರಾಳಿಗಳು ಬೆಚ್ಚಿ ಬೀಳಬೇಕು. ಸೈನ್ಯದಲ್ಲಿ ಇಲ್ಲದಿದ್ದರೂ 'ಸರ್ದಾರ್'ಎಂಬ ಅನ್ವರ್ಥಕವಾದ ಬಿರುದು. ಗಾಂಧಿಯವರ ಬಲಗೈಯಾಗಿ ಸ್ವಾತಂತ್ರ್ಯ ಚಳವಳಿಯನ್ನು ನಡೆಸಿದಾತ. ಬಾರ್ಡೋಲಿಯ ಸತ್ಯಾಗ್ರಹವನ್ನು ಬ್ರಿಟಿಷ್ ಆಳರಸರು ತತ್ತರಿಸುವಂತೆ ನಡೆಸಿದಾತ.

ಸಂವಿಧಾನ ಸಭಾಧ್ಯಕ್ಷ ರಾಜೇಂದ್ರ ಪ್ರಸಾದ್ ಭಾರತದ ಸ್ವಾತಂತ್ರ್ಯಕ್ಕಾಗಿ ನಗು ನಗುತ ಗಲ್ಲಿಗೇರಿದ, ಗುಂಡುಗಳಿಗೆ ತುತ್ತಾದ ಅಗಣಿತ ಭಾರತೀಯ ಸ್ತ್ರೀಪುರುಷರ ಬಲಿದಾನಕ್ಕಾಗಿ ನಾಡಿನ ಕೃತಜ್ಞತೆಯನ್ನು ಸಲ್ಲಿಸಿ, ಸ್ವಾತಂತ್ರ್ಯ ಚಳವಳಿಗಳ ನಾಯಕ ಮಹಾತ್ಮ ಗಾಂಧಿಯವರಿಗೆ ಗೌರವವನ್ನು ಸಮರ್ಪಿಸಿದರು.

ಹನ್ನೆರಡು ಘಂಟೆ ಹೊಡೆಯಿತು. ಸಂವಿಧಾನ ಸಭಾಸದಸ್ಯನೋರ್ವ ಶಂಖವನ್ನು ಊದಿ ಭಾರತಸ್ವಾತಂತ್ರ್ಯದ ಶುಭಮುಹೂರ್ತ ಆಗಮಿಸಿದುದನ್ನು ನಿರ್ದೇಶಿಸಿದ. 'ಈಗ ಆಗಸ್ಟ್ ಹದಿನೈದು' ಎಂದು ಇನ್ನೊಬ್ಬಾತ ಮೊಳಗಿದ. ಸದಸ್ಯರ ಹರ್ಷಘೋಷ ಸಭಾಭವನವನ್ನು ಆವರಿಸಿತು.

ಜನತೆಯ ಸೇವೆಗಾಗಿ, ನಾಡಿನ ಉತ್ಕರ್ಷಕ್ಕಾಗಿ ತನ್ನನ್ನು ಮುಡಿಪಾಗಿಡುವ ಪ್ರಮಾಣ ವಚನವನ್ನು ಅಧ್ಯಕ್ಷ ರಾಜೇಂದ್ರ ಪ್ರಸಾದ್ ಗಂಭೀರವಾಣಿಯಲ್ಲಿ ಪಠಿಸಿದರು. ಸರ್ವಸದಸ್ಯರೂ ಎದ್ದುನಿಂತು ಪ್ರಮಾಣ ವಚನವನ್ನು ಪುನರ್ಪಠಿಸಿದರು. ಸಂವಿಧಾನ ಸಭೆ ಭಾರತವನ್ನಾಳುವ ಅಧಿಕಾರವನ್ನು ವಹಿಸಿಕೊಂಡಿತು.

ಜನನಾಯಕ ಜವಾಹರ್‌ಲಾಲ್ ನೆಹರು ಘೋಷಿಸಿದರು : "ದೀರ್ಘಕಾಲದ ಜಡ ನಿದ್ರೆಯಿಂದ, ಹೋರಾಟದಿಂದ ಭಾರತ ಎಚ್ಚೆತ್ತು, ಸ್ವತಂತ್ರವಾಗಿದೆ. ಬಡತನ, ಅಜ್ಞಾನ, ರೋಗಗಳನ್ನು ನಿವಾರಿಸಲು ನಾವೀಗ ಶ್ರಮಿಸಬೇಕು. ಸಂಪದ್ಭರಿತ, ಪ್ರಗತಿಶೀಲ, ಪ್ರಜಾರಾಜ್ಯವನ್ನು ಕಟ್ಟಲು ನಾವೀಗ ಪಣತೊಡಬೇಕು."

ಬಿಡುಗಡೆಯ ಬೆಳಕು

ಸ್ವಾತಂತ್ರ್ಯೋದಯವನ್ನು ನಾಡಿನ ಎಲ್ಲೆಡೆಗಳಲ್ಲೂ ಹರ್ಷದಿಂದ, ಉತ್ಸಾಹದಿಂದ ಆಚರಿಸಲಾಯಿತು. ಸ್ವಾತಂತ್ರ್ಯ ಚಳವಳಿಗಳ ಮಹಾನಾಯಕ ಗಾಂಧಿಯವರು ಯಾವುದರಲ್ಲೂ ಪಾಲ್ಗೊಳ್ಳದೆ, ದೆಹಲಿಗೆ ದೂರದ ಕಲ್ಕತ್ತೆಯ ಬಳಿ ಶಾಂತವಾಗಿ ಇದ್ದರು. ಸ್ವಾತಂತ್ರ್ಯ ದಿನ ಉಪವಾಸಮಾಡಿದರು. ಚರಕ ದಿಂದ ನೂಲುವುದರಲ್ಲಿ ಕಾಲ ಕಳೆದರು. ಆದರೆ ಕಲ್ಕತ್ತೆಯ ನಿವಾಸಿಗಳಿಗೆ ಗಾಂಧಿಯವರ ಬಿಡಾರ ಯಾತ್ರಾಸ್ಥಳವಾಯಿತು. ದಿನವೆಲ್ಲ ಅಗಣಿತ ಜನ ವಾಹಿನಿ ಗಾಂಧಿಯವರ ಬಳಿಸಾರಿ ಪ್ರಣಾಮಗಳನ್ನು ಸಲ್ಲಿಸಿತು.

# ಈಗ ಭಾರತ ಸ್ವತಂತ್ರ

ಬ್ರಿಟಿಷರು ಭಾರತವನ್ನು ಮೋಸ, ಕುತಂತ್ರಗಳಿಂದ ಗೆದ್ದರು. ಭಾರತದ ಐಶ್ವರ್ಯವನ್ನು ದೋಚಿಕೊಂಡು ಹೋದರು. ಭಾರತದ ಕಲೆ, ಕೈಗಾರಿಕೆಗಳನ್ನು ನಾಶಮಾಡಿದರು. ಒಳಜಗಳ, ಮತವೈಷಮ್ಯಗಳ ವಿಷಬೀಜವನ್ನು ದೇಶದಲ್ಲೆಲ್ಲ ಬಿತ್ತಿದರು. ಪದೇ ಪದೇ ಕ್ಷಾಮಗಳನ್ನುಂಟುಮಾಡಿ ಲಕ್ಷಾಂತರ ಜನರನ್ನು ಸಾಯಿಸಿದರು.

ಬ್ರಿಟಿಷರನ್ನು ಭಾರತದಿಂದ ಓಡಿಸಲು ಭಾರತೀಯರು ಹಲವು ಯುದ್ಧ, ಹಲವು ಚಳವಳಿಗಳನ್ನು ಹೂಡಬೇಕಾಯಿತು. ಈ ಸ್ವಾತಂತ್ರ್ಯ ಸಮರಗಳ, ಈ ಸ್ವಾತಂತ್ರ್ಯ ಚಳವಳಿಗಳ ಕತೆಯನ್ನು ಇಲ್ಲಿ ತಿಳಿಸಿದ್ದೇವೆ. ಸ್ವತಂತ್ರ ಭಾರತದ ಮಹತ್ಸಾಧನೆಗಳನ್ನೂ ಮತ್ತು ಭಾರತದ ಮಹಾನಾಯಕರ ಬಗೆಗೂ ಇಲ್ಲಿ ತಿಳಿಸಿದ್ದೇವೆ.

ಇಂದು ನಾವು ಬಿಡುಗಡೆ ಪಡೆದುದರ ಬೆಳ್ಳಿಹಬ್ಬ. ಬಿಡುಗಡೆಯ ಬೆಳ್ಳಿಹಬ್ಬದ ದಿನ ನಾವು ಮುಂದೆಂದೂ ಒಳಜಗಳಗಳಿಂದ ನಿಶ್ಶಕ್ತರಾಗದೆ, ಮುಂದೆಂದೂ ವಿದೇಶೀಯರಿಗೆ ಅಡಿಯಾಳುಗಳಾಗದೆ ಇರಲೆಂದು ಪಣ ತೊಡೋಣ. ಇದಕ್ಕೆ ತಕ್ಕುದಾದ ಬಾಳ್ವೆಯನ್ನು ಬಾಳೋಣ.

# ೧. ಹಿನ್ನೆಲೆಯ ಕಥೆ

## ನಮ್ಮ ದೇಶ ಭಾರತ

ಮರೀಚಿ ಮಹರ್ಷಿಗಳ ಆಶ್ರಮದಲ್ಲಿ ಶಕುಂತಲೆ ಗಂಡು ಮಗುವನ್ನು ಹೆತ್ತಳು. ಈ ಮಗು ಮುಂದೆ ಚಕ್ರವರ್ತಿತ್ವದ ಭಾರವನ್ನು ಹೊರುವುದೆಂದು ಭವಿಷ್ಯನುಡಿದು, ಮರೀಚಿ ಮಹರ್ಷಿ ಅವನಿಗೆ 'ಭರತ' ಎಂದು ಹೆಸರಿಟ್ಟರು. ಮುಂದೆ ಚಕ್ರವರ್ತಿಯಾಗಿ ಸಾಮ್ರಾಜ್ಯವಾಳಿದ ಭರತನಿಂದಲೇ ನಮ್ಮ ಈ ಪ್ರಾಚೀನ ಪುಣ್ಯಭೂಮಿಗೆ 'ಭರತವರ್ಷ' ಅಥವಾ 'ಭಾರತ' ಎಂಬ ಸಾರ್ಥಕ ಹೆಸರುಂಟಾಯ್ತು.

ಈ ದೇಶಕ್ಕೆ ಹಲವು ಕಡೆಗಳಿಂದ, ಬೇರೆ ಬೇರೆ ಕಾಲಗಳಲ್ಲಿ ದ್ರಾವಿಡರು, ಆರ್ಯರು, ಇರಾನಿಯರು, ಗ್ರೀಕರು, ಪಾರ್ಥಿಯನರು, ಕುಶಾನರು, ಶಕರು, ಹೂಣರು, ಮಹಮ್ಮದೀಯರು, ಕ್ರೈಸ್ತರು—ಹೀಗೆ ಅನೇಕ ವಿದೇಶೀಯ ಕುಲಗಳ ಪ್ರವಾಹಗಳು ಧಾವಿಸಿ ಬಂದರೂ ಕೆಲಕಾಲಾನಂತರ ಭಾರತದ ಸಂಸ್ಕೃತಿಸಾಗರವನ್ನೇ ಸೇರಿ ಸಮರಸಗೊಂಡಿವೆ. ಹಾಗೆ ಸಮರಸಗೊಳ್ಳದ ಜನ ಭಾರತವನ್ನು ಬಿಟ್ಟು ಹೊರಟುಹೋಗಿದ್ದಾರೆ. ವೈವಿಧ್ಯಪೂರ್ಣ, ವರ್ಣ ರಂಜಿತ ಭಾರತ ಸಂಸ್ಕೃತಿಯ ಸತ್ವವಿರುವುದು ಇಲ್ಲಿ!

ಗಾಳಿ ಉಸಿರಾಡುವುದಕ್ಕೆ ಅವಶ್ಯವಾಗಿರುವಂತೆ ಒಂದು ದೇಶ ನೆಮ್ಮದಿಯಿಂದ ಬಾಳಿ ಬೆಳೆಯುವುದಕ್ಕೆ ಸ್ವಾತಂತ್ರ್ಯ ತೀರ ಆವಶ್ಯಕ. ಸ್ವಾತಂತ್ರ್ಯವೇ ದೇಶದ ಎಲ್ಲ ಭಾಗ್ಯಗಳ ಮೂಲ. ಸಹಸ್ರಾರು ವರುಷಗಳಿಂದ ಭಾರತವು ಒಟ್ಟಿನಲ್ಲಿ ಸ್ವಾತಂತ್ರ್ಯ ಸುಖದಲ್ಲೇ ಬೆಳೆದುಬಂದಿದೆ. ಈ ಸ್ವಾತಂತ್ರ್ಯಕ್ಕೆ ಹಲವಾರು ಸಲ ಬಾಧೆ ತಟ್ಟಿರಬಹುದು. ಅದು ಸಹಜ. ಆದರೂ ಅಂತಹ

ಬಾಧೆಗಳನ್ನು ಪರಿಹರಿಸಿಕೊಂಡು ಭಾರತ ಮುನ್ನುಗ್ಗುತ್ತಲೇ ಬಂದಿರುವುದು ಅದರ ಅಂತಃಶಕ್ತಿಗೆ ಸಾಕ್ಷಿ.

## ದಾಸ್ಯದ ಮೊದಲ ಕಹಿ

ಕ್ರಿ. ಶ. ೧೨೦೬ರಲ್ಲಿ ದೆಹಲಿಯ ಸುಲ್ತಾನರ ಆಳಿಕೆ ಆರಂಭವಾದಾಗ ಮಾತ್ರ ಭಾರತೀಯರು ಮೊಟ್ಟಮೊದಲ ಸಲ ತಮ್ಮ ಸ್ವಾತಂತ್ರ್ಯಭಾಗ್ಯಕ್ಕೆ ಎರವಾದರು. ಈ ಶತಮಾನದಲ್ಲಿ ಭಾರತೀಯರು ತಮ್ಮ ದೇಶದಲ್ಲೇ ದ್ವಿತೀಯ ದರ್ಜೆಯ ಪ್ರಜೆಗಳಾಗಿ ಬಾಳುವ ದುಸ್ಥಿತಿಗೆ ಇಳಿದರು. ತರುವಾಯದಲ್ಲಿ ಬಂದ ಮೊಗಲ್ ಸಾಮ್ರಾಜ್ಯವು ಹಿಂದೂಗಳ ಅಸಹಾಯಕತೆಯನ್ನು ಹೆಚ್ಚಿಸಿತು. ಅವರು ತೆರಬೇಕಾಗಿದ್ದ ಜಸಿಯ ಮತ್ತು ಯಾತ್ರಿಕರ ತೆರಿಗೆಗಳು ಅವರ ಅಸಮಾನತೆಯನ್ನು ವ್ಯಕ್ತಗೊಳಿಸಿದವು. ವಿಜಯನಗರ ಸಾಮ್ರಾಜ್ಯ ಮತ್ತು ಶಿವಾಜಿಯ 'ಹಿಂದೂ ಸ್ವರಾಜ್ಯ'—ಇವು ಹಿಂದೂಗಳ ಅಸಹಾಯಕತೆಯನ್ನು ಕೆಲಕಾಲ ಮಾತ್ರ ನಿವಾರಿಸಿದರೂ ಹಿಂದೂ–ಮುಸಲ್ಮಾನರಲ್ಲಿ ಆರಂಭವಾದ ದ್ವೇಷಾಸೂಯೆಗಳು ಹೆಚ್ಚುತ್ತಲೇ ಹೋದವು. ಈ ವಿಷಮ ಪರಿಸ್ಥಿತಿಯೇ ಅನಂತರ ಬಂದ ಆಂಗ್ಲರ ಆಧಿಪತ್ಯಕ್ಕೆ ಔತಣವಿತ್ತಿತು.

# ಆಂಗ್ಲರ ಆಗಮನ

ಪ್ರಾಚೀನಕಾಲದಿಂದಲೂ ಭಾರತವು ಸಮೃದ್ಧವಾದ ಸಮುದ್ರವ್ಯಾಪಾರವನ್ನು ನಡೆಸುತ್ತಿತ್ತು. ದಕ್ಷಿಣ ಭಾರತದಲ್ಲಿ ಹುಟ್ಟುವಳಿಯಾಗುತ್ತಿದ್ದ ಮಸಾಲೆಯ ಪದಾರ್ಥಗಳು, ಸುಗಂಧದ್ರವ್ಯಗಳು, ಹಸ್ತಿದಂತ, ಮುತ್ತುರತ್ನ, ರೇಶ್ಮೆ ಮತ್ತು ಹತ್ತಿಯ ಬಟ್ಟೆಗಳು ಇತ್ಯಾದಿಗಳಿಗೆ ಹೊರದೇಶದ ಮಾರುಕಟ್ಟೆಗಳಲ್ಲಿ ತುಂಬ ಬೇಡಿಕೆ ಇತ್ತು. ಈ ವ್ಯಾಪಾರದಿಂದ ಭಾರತ ಗಳಿಸುವ ಲಾಭದತ್ತ ವಿದೇಶೀಯರ ಆಶೆಯ ದೃಷ್ಟಿ ಹರಿದುದು ಸಹಜ. ಮೊದಲು ಅರಬ್ ವ್ಯಾಪಾರಿಗಳು ಹತ್ತನೆಯ ಶತಮಾನದಲ್ಲೇ ಭಾರತಕ್ಕೆ ಬಂದರು. ಅವರು ಭಾರತದ ಈ ವ್ಯಾಪಾರದಲ್ಲಿ ಮಧ್ಯಸ್ತಗಾರರಾಗಿ ಭಾರತದ ಸರಕುಗಳನ್ನು ಅಲೆಕ್ಸಾಂಡ್ರಿಯದವರೆಗೂ ಒಯ್ಯುತ್ತಿದ್ದರು. ಅಲ್ಲಿಂದ ಯುರೋಪಿನ ವರ್ತಕರು ಇತರ ಭಾಗಗಳಿಗೆ ಸಾಗಿಸುತ್ತಿದ್ದರು. ಅರಬರಿಗಾಗುತ್ತಿದ್ದ ಲಾಭ ಪೋರ್ತುಗೀಜರಿಗೆ ಕಣ್ಣುಕಿಸುರಾಯ್ತು. ಕ್ರಿ.ಶ.೧೪೯೮ರಲ್ಲಿ ವಾಸ್ಕೋಡಿಗಾಮ ಭಾರತಕ್ಕೆ ಹೊಸ ಜಲ ಮಾರ್ಗವನ್ನು ಕಂಡುಹಿಡಿದಮೇಲೆ ಪೋರ್ತುಗೀಜರು ಪೂರ್ವದ ಜತೆ ವ್ಯಾಪಾರವನ್ನು ಆರಂಭಿಸಿದರು. ಭಾರತದಲ್ಲಿ ವಸಾಹತುಗಳನ್ನು ಸ್ಥಾಪಿಸಿದ ಯುರೋಪೀಯರಲ್ಲಿ ಪೋರ್ತುಗೀಜರೇ ಮೊದಲಿಗರು. ತರುವಾಯದಲ್ಲಿ ಡಚ್ಚರು, ಆಂಗ್ಲರು, ಫ್ರೆಂಚರು ಅನುಕ್ರಮವಾಗಿ ಬಂದರು. ಭಾರತದೊಡನೆ ನಡೆದ ಈ ವ್ಯಾಪಾರಕ್ಕಾಗಿ ಈ ಐರೋಪ್ಯಶಕ್ತಿಗಳಲ್ಲಿ ಪೈಪೋಟಿ ಅನಿವಾರ್ಯವಾಯ್ತು.

ಕೈಗಾರಿಕಾ ವಸ್ತುಗಳ ಉತ್ಪಾದನೆಯಲ್ಲಿ ಆಗ ಭಾರತವು ವಿಶ್ವದಲ್ಲೇ ಮಿಗಿಲಾದ ರಾಷ್ಟ್ರವಾಗಿತ್ತು. ಈ ವಸ್ತುಗಳಿಗೆ ಬೇಡಿಕೆಯಿಲ್ಲದ ದೇಶವೇ ಇರಲಿಲ್ಲ. ಭಾರತವು ತನ್ನ ಈ ಸರಕುಗಳನ್ನು ಚಿನ್ನ-ಬೆಳ್ಳಿಗಳೊಂದಿಗೆ ವಿನಿಮಯ ಮಾಡಿಕೊಳ್ಳುತ್ತಿತ್ತು. "ಸಮುದ್ರದಲ್ಲಿ ಐಕ್ಯವಾಗುವ ನದಿಗಳಂತೆ ಬೆಳ್ಳಿಯ ತೊರೆಗಳು ಭಾರತಕ್ಕೆ ಹರಿದುಬರುತ್ತಿವೆ" ಎಂದು ಚರಿತ್ರಕಾರ ಟೆರ್ರಿ ಹೇಳಿ

ದ್ದಾನೆ. ೧೮ನೆಯ ಶತಕದ ಅರ್ಧಭಾಗದಲ್ಲಿ ಇಂಗ್ಲೆಂಡ್ ಒಂದರಿಂದಲೇ ಸುಮಾರು ಎರಡು ಕೋಟಿ ಪೌಂಡು ಬೆಲೆಬಾಳುವ ಚಿನ್ನವನ್ನು ಭಾರತ ಆಮದು ಮಾಡಿಕೊಂಡಿತು!

ಭಾರತದೊಡನೆ ದೊಡ್ಡ ಪ್ರಮಾಣದಲ್ಲಿ ವ್ಯಾಪಾರ ನಡೆಸಬೇಕೆಂದು ಹಲವು ಬ್ರಿಟಿಷ್‌ವರ್ತಕರು ಒಟ್ಟುಗೂಡಿ 'ಈಸ್ಟ್ ಇಂಡಿಯಾ ಕಂಪನಿ' ಎಂಬ ವ್ಯಾಪಾರ ಸಂಸ್ಥೆಯನ್ನು ಕಟ್ಟಿದ್ದರು. ಮೊಗಲ್ ಚಕ್ರವರ್ತಿ ಜಹಾಂಗೀರನ ಕಾಲದಿಂದಲೇ ಈ ಕಂಪನಿ ಭಾರತದ ಅನೇಕ ಪಟ್ಟಣಗಳಲ್ಲಿ ವ್ಯಾಪಾರದ ಮಳಿಗೆಗಳನ್ನು ಕಟ್ಟಿತ್ತು.

ಆಗ ಭಾರತದಲ್ಲಿ ಅನೇಕಾನೇಕ ಸಣ್ಣ ದೊಡ್ಡ ರಾಜರಿದ್ದರು. ಇವರೆಲ್ಲ ಸದಾ ಒಳಜಗಳಗಳಲ್ಲಿ ತೊಡಗುತ್ತಿದ್ದರು. ಹಿಂದೂ ಮುಸಲ್ಮಾನರಲ್ಲೂ ವೈಷಮ್ಯವಿತ್ತು. ಈ ಒಳಜಗಳ, ಒಡಕುಗಳಲ್ಲಿ ಸಮಯ ಸಾಧಿಸಿ ಈಸ್ಟ್ ಇಂಡಿಯಾ ಕಂಪನಿ ಭಾರತದ ರಾಜಕೀಯದಲ್ಲೂ ಕೈ ಹಾಕಿತು. ರಾಜ್ಯವನ್ನು ಕಟ್ಟತೊಡಗಿತು.

ಭಾರತದ ರಾಜಕಾರಣದಲ್ಲಿ ಕಂಪನಿ ಸರಕಾರದ ಹಸ್ತಕ್ಷೇಪ ಪ್ರಬಲಿಸಿದಾಗ ಭಾರತೀಯರಿಗೆ ತಮ್ಮ ತಪ್ಪಿನ ಅರಿವಾಯ್ತು. ಆದರೆ ಈ ಹೊತ್ತಿಗೆ ಕಾಲ ಮಿಂಚಿಹೋಗಿತ್ತು. ಕಂಪನಿಯವರ ಅನ್ಯಾಯ ಮತ್ತು ದಬ್ಬಾಳಿಕೆಗಳನ್ನು ಭಾರತೀಯರು ಸಹಿಸದಾದರು. ದೇಶದ ಒಂದು ಭಾಗದಲ್ಲಿ ಕಂಪನಿ ಸರಕಾರ ತಮ್ಮ ರಾಜ್ಯವನ್ನು ವಿಸ್ತರಿಸುತ್ತಿದ್ದಾಗ ಮತ್ತೊಂದು ಭಾಗದಲ್ಲಿ ಜನ ದಂಗೆ ಏಳುವುದು ಸಾಮಾನ್ಯವಾಯ್ತು. ೧೭೫೭ರ ಪ್ಲಾಸಿ ಯುದ್ಧದಲ್ಲಿ ಈ ಬ್ರಿಟಿಷ್ ಕಂಪನಿ ಗೆದ್ದು, ಬಂಗಾಳದಲ್ಲಿ ರಾಜ್ಯಭಾರವನ್ನು ಆರಂಭಿಸಿದ ತರುವಾಯ ೧೮೫೭ರ ವರೆಗಿನ ಒಂದು ನೂರು ವರುಷಗಳ ಅವಧಿಯಲ್ಲಿ ಸಹನೆ ಮೀರಿದ ಜನ ದಂಗೆ ಏಳದ ವರ್ಷವೇ ಇರಲಿಲ್ಲ. ಇದಕ್ಕೆ ಪ್ರಬಲ ಕಾರಣಗಳು ಹೀಗಿದ್ದವು :

ದೇಶದ ವ್ಯಾಪಾರದಲ್ಲಿ ಈಸ್ಟ್ ಇಂಡಿಯಾ ಕಂಪನಿಯವರು ಸ್ಥಾಪಿಸಿಕೊಂಡ ಏಕಸ್ವಾಮ್ಯತೆಯ ಪರಿಣಾಮವಾಗಿ ಸ್ಥಳೀಯ ವ್ಯಾಪಾರಿಗಳು

ವ್ಯಾಪಾರದ ಸೌಲಭ್ಯವನ್ನು ಕಳೆದುಕೊಂಡರು. ಅವರು ಆಂಗ್ಲ ವ್ಯಾಪಾರಿಗಳ ಸಿಬ್ಬಂದಿಯಾಗಿರುವಲ್ಲಿಯೇ ತೃಪ್ತಿಪಡಬೇಕಾಯ್ತು. ಕಂಪನಿಯವರು ಆರಂಭಿಸಿದ ಭೂಹಿಡುವಳಿ ಸುಧಾರಣೆಯ ಕಾರ್ಯಕ್ರಮ ಮತ್ತು ಭೂಕಂದಾಯದ ವಸೂಲಿಯ ವ್ಯವಸ್ಥೆಗಾಗಿ ಜಮೀನು ಹರಾಜು ಮಾಡುವ ನೀತಿ–ಇವುಗಳಿಂದ ಜನರು ತಮ್ಮ ಪೂರ್ವಾರ್ಜಿತ ಆಸ್ತಿಗಳನ್ನು ಕಳೆದುಕೊಳ್ಳಬೇಕಾಯ್ತು. ಕಂಪನಿಯವರ ನ್ಯಾಯದಾನ ಕಟ್ಟಳೆಗಳು ನಿರಾಶೆಯನ್ನು ಹುಟ್ಟಿಸಿದವು. ಕೋರ್ಟುಗಳಿಗೆ ತೆರುವ ವೆಚ್ಚ ವಿಪರೀತವಾಯ್ತು. ಕಾಲ ತಿನ್ನುವ ಕೋರ್ಟುಗಳಿಂದ ನ್ಯಾಯದೊರಕಿಸಿಕೊಳ್ಳುವುದು ತೀರ ಕಠಿಣವೆನಿಸಿತು. ಅಲ್ಲದೆ ಕಂಪನಿ ಸರಕಾರ ಹೊಸ ಹೊಸ ತೆರಿಗೆಗಳನ್ನು ಹೇರಿ ವಿಧಿಸತೊಡಗಿತು. ಸಹಗಮನ—ಬಾಲ್ಯವಿವಾಹ ಪದ್ಧತಿಗಳನ್ನು ರದ್ದು ಪಡಿಸುವ ಸಮಾಜ ಸುಧಾರಣೆ ಮತ್ತು ಕ್ರೈಸ್ತಧರ್ಮಪ್ರಚಾರ ಹಾಗೂ ಮತಾಂತರಕಾರ್ಯ—ಇವು ಜನತೆಯನ್ನು ದಿಗಿಲುಗೊಳಿಸಿದವು. ಮತ್ತು ಲಾರ್ಡ್ ವೆಲ್ಲಸ್ಲಿ ಆರಂಭಿಸಿದ 'ಸಹಾಯಕ ಸೈನಿಕ ಪದ್ಧತಿ'ಯಿಂದಾಗಿ ರಾಜ–ಮಹಾರಾಜರು ಕಂಪನಿಯ ಹೊಸದೊಂದು ಕುಟಿಲತಂತ್ರಕ್ಕೆ ಬಲಿಯಾಗತೊಡಗಿದರು. ನೆರೆರಾಜರ ಉಪಟಳಕ್ಕೆ ಸಿಕ್ಕಿಬಿದ್ದ ರಾಜರು ಅದರ ನಿವಾರಣೆಗಾಗಿ ಆಂಗ್ಲರ ಸಹಾಯವನ್ನು ಅಪೇಕ್ಷಿಸುತ್ತಿದ್ದರು. ಆಗ ಕಂಪನಿಯ ಒಂದು ಸೈನ್ಯದಳವನ್ನು ತಮ್ಮ ರಾಜ್ಯದಲ್ಲಿ ಇರಿಸಿಕೊಳ್ಳಬೇಕಾಗುತ್ತಿತ್ತು. ಅದರ ಪೋಷಣೆಗಾಗಿ ಆ ರಾಜರು ಆಂಗ್ಲರಿಗೆ ನಗದು ಹಣ ಇಲ್ಲವೆ ಕೆಲವು ಪ್ರದೇಶಗಳನ್ನು ಅವರ ವಶಕ್ಕೆ ಕೊಡಬೇಕಾಗುತ್ತಿತ್ತು. ಅಲ್ಲದೆ ಈ ಪದ್ಧತಿಗೆ ಒಳಪಟ್ಟ ರಾಜರು ಆಂಗ್ಲರ ಅನುಮತಿಯಿಲ್ಲದೆ ಬೇರೆ ರಾಜರೊಂದಿಗೆ ವ್ಯವಹರಿಸಕೂಡದಾಗಿತ್ತು. ಹೀಗೆ ಆ ರಾಜರ ಸ್ವಾತಂತ್ರ್ಯಹರಣವಾಗುತ್ತಿತ್ತು. ಈ ಮುಂತಾದ ಕಾರಣಗಳಿಂದ ಪ್ರಜೆಗಳಲ್ಲಿ ಅಶಾಂತಿ ಹೆಚ್ಚಿತು.

## ಕ್ಷೋಭೆ ಮತ್ತು ಸಶಸ್ತ್ರ ಪ್ರತಿಭಟನೆ

ಸಾರ್ವತ್ರಿಕ ಕ್ಷೋಭೆ ಮತ್ತು ಅಸಂತೋಷಗಳು ದಿನಗಳೆದಂತೆ ಹೆಚ್ಚುತ್ತಲೆ ಹೋದವು; ಜನ ತಾಳ್ಮೆಗೆಟ್ಟು ಗೊಣಗತೊಡಗಿದರು. ಕೆಲವೇಳೆ ಆರ್ಭ

ಟಿಸತೊಡಗಿದರು. ತಿಳಿದವರಾದ ವಿದ್ಯಾವಂತರು ತಮ್ಮ ದುಃಖವನ್ನೂ ಕೋಪವನ್ನೂ ಭಾಷಣ-ಬರವಣಿಗೆಗಳಲ್ಲಿ ವ್ಯಕ್ತಪಡಿಸಿದರು. ಆದರೆ ಕಾಳ್ಗಿಗೆಟ್ಟಾಗ ದೇಶಪ್ರೇಮಿಗಳು ಆಯುಧಗಳನ್ನು ಧರಿಸಬೇಕಾಯ್ತು.

# ಹೈದರಾಲಿ

ಪ್ಲಾಸಿ ಯುದ್ಧದ ಗೆಲುವಿನಿಂದ ಬಂಗಾಲದ ನವಾಬಶಾಹಿ ಅಳಿಯಿತು. ಬ್ರಿಟಿಷ್ ಸಾಮ್ರಾಜ್ಯಶಾಹಿಯ ಬುನಾದಿ ಸ್ಥಾಪಿತವಾಯ್ತು. ಇದರಿಂದ ಆಂಗ್ಲರ ಸಾಮ್ರಾಜ್ಯಾಕಾಂಕ್ಷೆ ಪ್ರಬಲಿಸಿತು. ಬಂಗಾಲ, ಬಿಹಾರ, ಒರಿಸ್ಸಾ ಮೊದಲಾದ ಪ್ರಾಂತ್ಯಗಳ ಆಡಳಿತ ಸೂತ್ರಗಳು ಕಂಪನಿ ಸರಕಾರದ ಕೈಗೆ ಬಂದಾಗ ಅವರ ಆಶೆಯ ದೃಷ್ಟಿ ದಕ್ಷಿಣಭಾರತದ ಕಡೆಗೂ ಹರಿಯಿತು. ಆದರೆ ಅಲ್ಲಿ ಹೈದರಾಲಿಯ ಮುಂದೆ ಆಂಗ್ಲರ ಆಟ ನಡೆಯಲಿಲ್ಲ. ಹೈದರಾಲಿ ಮತ್ತು ಆತನ ಶೂರ ಮಗ ಟಿಪ್ಪುಸುಲ್ತಾನ್-ಇವರು ಸುಮಾರು ನಲವತ್ತು ವರ್ಷಗಳವರೆಗೆ ಆಂಗ್ಲರ ಆಕ್ರಮಣವನ್ನು ಬಲವಾಗಿ ತಡೆದರು.

ಹೈದರಾಲಿ ಆರಂಭದಲ್ಲಿ ಮೈಸೂರು ಸೈನ್ಯದಲ್ಲಿ ಸಿಪಾಯಿಯಾಗಿದ್ದವನು ತನ್ನ ಪರಾಕ್ರಮ ಮತ್ತು ಕುಟಿಲೋಪಾಯಗಳಿಂದ ಮೈಸೂರಿನ ಸರ್ವಾಧಿಕಾರಿಯಾದ. ಅವನದು ಅಸಾಧಾರಣ ಬುದ್ಧಿಶಕ್ತಿ. ಹೈದರಾಲಿ ಆಂಗ್ಲರ ಸಾಮರ್ಥ್ಯವನ್ನೂ ಕುಟಿಲನೀತಿಯನ್ನೂ ಚೆನ್ನಾಗಿ ಅರಿತಿದ್ದ. ಮರಾಠರು ಮತ್ತು ಹೈದರಾಬಾದಿನ ನಿಜಾಮ ಇವರೊಂದಿಗೆ ಒಪ್ಪಂದ ಮಾಡಿಕೊಂಡು ಆಂಗ್ಲರು ಹೈದರನ ಮೇಲೆ ಧಾಳಿಮಾಡುವ ಸನ್ನಾಹದಲ್ಲಿದ್ದರು. ತೀಕ್ಷ್ಣಮತಿಯಾದ ಹೈದರಾಲಿ, ಮರಾಠರು ಮತ್ತು ನಿಜಾಮ ಇವರು ತಟಸ್ಥನೀತಿಯನ್ನು ಅನುಸರಿಸುವಂತೆ ಮಾಡಿ ಆಂಗ್ಲರ ಮೇಲೆ ಎರಗಿದ. ಮದ್ರಾಸಿನಲ್ಲಿ ಕಂಪನಿ ಸರಕಾರದ ಸೇಂಟ್‌ಜಾರ್ಜ್ ಕೋಟೆಯನ್ನು ಹೈದರಾಲಿ ಆಕ್ರಮಿಸಿದಾಗ ಬ್ರಿಟಿಷರು ಆತನು ಹಾಕಿದ ಕರಾರುಗಳಿಗೊಪ್ಪಿ ಒಡಂಬಡಿಕೆ ಮಾಡಿಕೊಂಡರು. ಈ ಒಪ್ಪಂದದ ಪ್ರಕಾರ ಮುಂದೆ ನಡೆಯಬಹುದಾದ ಯುದ್ಧಗಳಲ್ಲಿ ಪರಸ್ಪರ ಸಹಾಯ ಮಾಡಬೇಕೆಂಬ ನಿಯಮವಿತ್ತು. ಆದರೆ ಹೈದರನು ಮರಾಠರೊಂದಿಗೆ ಯುದ್ಧ ಹೂಡಿದಾಗ ಆಂಗ್ಲರು ಕೊಟ್ಟ ಭಾಷೆಗೆ ತಪ್ಪಿದರು. ಇದರಿಂದ ಹೈದರಾಲಿ ಆಂಗ್ಲರ ಮೇಲೆ ರೊಚ್ಚಿಗೆದ್ದ. ಆದರೆ ಆಂಗ್ಲರು

ಇವನಿಂದ ಅನುಭವಿಸಿದ್ದ ಸೋಲಿನ ಸೇಡು ತೀರಿಸಿಕೊಳ್ಳಲು ಹೊಂಚುಹಾಕಿದ್ದರು. ಇದರಿಂದ ಉಂಟಾದ ಫಲ ಎರಡನೆಯ ಮೈಸೂರು ಯುದ್ಧ. ಫ್ರೆಂಚರಿಂದ ನಿರೀಕ್ಷಿಸಿದ್ದ ನೆರವು ದೊರೆಯದ್ದರಿಂದ ಹೈದರಾಲಿ ಕೆಲವು ಕದನಗಳಲ್ಲಿ ಸೋತ. ಆದರೂ ಪಶ್ಚಿಮ ಪ್ರದೇಶದಲ್ಲಿ ಯುದ್ಧವನ್ನು ಮುಂದುವರಿಸಿದ. ಯುದ್ಧ ನಡೆಯುತ್ತಿರುವಾಗಲೇ ೧೭೮೨ರಲ್ಲಿ ಬೆನ್ನುಫಣಿಯಿಂದ ತೀರಿಕೊಂಡ. ಟಿಪ್ಪು ಮಾಡಿಕೊಂಡ ಮಂಗಳೂರು ಒಪ್ಪಂದದಿಂದ ಈ ಯುದ್ಧ ಕೊನೆಗೊಂಡಿತು.

ತನ್ನ ರಾಜ್ಯವನ್ನು ಪರಾಧೀನತೆಯಿಂದ ತಪ್ಪಿಸಬೇಕೆಂಬುದೇ ಹೈದರನ ಈ ಯುದ್ಧಗಳ ಧ್ಯೇಯವಾಗಿತ್ತು. ಆಂಗ್ಲರು ಕಪಟಿಗಳೆಂದು ಅರಿತಾಗ ಅವರೊಂದಿಗೆ ಜೀವದ ಹಂಗುದೊರೆದು ಹೋರಾಡಿದ. ಹೈದರ್ ಅಳಿದರೂ ಆತ ಹೊತ್ತಿಸಿದ್ದ ಸ್ವಾತಂತ್ರ್ಯಜ್ಯೋತಿ ನಂದಲಿಲ್ಲ. ಆತನ ಮಗ ಟಿಪ್ಪು ಅದನ್ನು ಇನ್ನಷ್ಟು ಪ್ರಖರಗೊಳಿಸಿದ.

## ಟಿಪ್ಪುಸುಲ್ತಾನ್

"ಮೈಸೂರು ಹುಲಿ" ಎಂದು ಹೆಸರಾಂತ ಟಿಪ್ಪು ಹೈದರಾಲಿಗೆ ತಕ್ಕ ಮಗ. ತಂದೆಯ ಹಾಗೆಯೇ ಸ್ವಾತಂತ್ರ್ಯಪ್ರೇಮಿ. ಆಂಗ್ಲರನ್ನು ಕರ್ನಾಟಕದಿಂದ ಹೊರದೂಡುವುದೇ ಅವನ ಜೀವನದ ಆಕಾಂಕ್ಷೆ. ತಂದೆ ಹೂಡಿದ್ದ ಯುದ್ಧಗಳಲ್ಲಿ ಪಾಲ್ಗೊಳ್ಳುತ್ತಿದ್ದ ಟಿಪ್ಪು ಆಂಗ್ಲರ ಬಲಾಬಲಗಳನ್ನು ಚೆನ್ನಾಗಿ ಅರಿತಿದ್ದ. ಮಂಗಳೂರು ಒಪ್ಪಂದವನ್ನು ಆತನು ಮರೆತಿರಲಿಲ್ಲವಾದರೂ ಸ್ವಂತ ಬಲದಿಂದಲೇ ಅವರನ್ನು ಹೊಡೆದೋಡಿಸುವುದು ಅಸಾಧ್ಯವೆಂಬುದು ಆತನಿಗೆ ಮನವರಿಕೆಯಾಗಿತ್ತು. ತನ್ನ ಉದ್ದೇಶ ಸಾಧನೆಗಾಗಿ ಮರಾಠರೊಂದಿಗೆ, ನಿಜಾಮನೊಂದಿಗೆ ಮತ್ತು ಪರದೇಶಗಳೊಂದಿಗೂ ಮಿತ್ರಕೂಟ ರಚಿಸಲು ಟಿಪ್ಪು ಯತ್ನಿಸಿದ. ಇದಕ್ಕಾಗಿ ಫ್ರಾನ್ಸ್–ಟರ್ಕಿಗಳಿಗೆ ತನ್ನ ರಾಯ

ಭಾರಗಳನ್ನು ಕಳಿಸಿದ. ಮರಾಠರ ಸ್ನೇಹ ಗಳಿಸುವ ಅಪೇಕ್ಷೆಯಿಂದ ನರಗುಂದದ ವಿಷಯದಲ್ಲಿ ಮರಾಠರೊಂದಿಗೆ ನಡೆದ ಯುದ್ಧದಲ್ಲಿ ತಾನು ಗೆದ್ದರೂ ಟಿಪ್ಪು ಅವರೊಂದಿಗೆ ಔದಾರ್ಯದಿಂದಲೇ ವರ್ತಿಸಿದ. ಪರಸ್ಪರ ಮೈತ್ರಿ ಸ್ಥಾಪನೆಗಾಗಿ ನಿಜಾಮನು ಕಳಿಸಿದ್ದ ರಾಯಭಾರವನ್ನು ಆದರದಿಂದ ಬರಮಾಡಿಕೊಂಡು, ಮೈತ್ರಿ ಒಪ್ಪಂದಕ್ಕೆ ಸಮ್ಮತಿಸಿ ಅದು ಶಾಶ್ವತವಾಗಲು ವಿವಾಹ ಸಂಬಂಧ ಬೆಳೆಸಲೂ ತಾನು ಸಿದ್ಧನಿರುವುದಾಗಿ ನಿಜಾಮನಿಗೆ ಹೇಳಿ ಕಳಿಸಿದ. ಆದರೆ ಇದರಿಂದ ಪ್ರಯೋಜನವಾಗಲಿಲ್ಲ.

ತನ್ನ ರಾಜಕಾರಣ ಕಾರ್ಯಭಾರ ಅಷ್ಟೊಂದು ಫಲಕಾರಿಯಾಗದಿದ್ದರೂ ಟಿಪ್ಪು ತನ್ನ ಯುದ್ಧ ಸನ್ನಾಹದಲ್ಲಿ ಸ್ವಲ್ಪವೂ ಹಿಂಜರಿಯಲಿಲ್ಲ. ಆಯಕಟ್ಟಿನ ಸ್ಥಳಗಳಲ್ಲಿ ಸೈನ್ಯ ಜಮಾವಣೆ ಮಾಡಿದ. ಪಾಂಡಿಚೇರಿಯ ಕೋಟೆಯನ್ನು ಭದ್ರಪಡಿಸಿದ. ಇದರಿಂದ ಆಂಗ್ಲರು ನಿಜವಾಗಿಯೂ ಹೆದರಿದರು. ಆದರೆ ತಮ್ಮ ಭೇದೋಪಾಯ ನೀತಿಯಿಂದ ಮರಾಠರನ್ನೂ, ನಿಜಾಮನನ್ನೂ ತಮ್ಮ ಕಡೆಗೆ ಮನವೊಲಿಸಿಕೊಂಡರು. ಆಗಿನ ಗವರ್ನರ್ ಜನರಲ್ ಲಾರ್ಡ್ ಕಾರ್ನವಾಲೀಸ್ ಮೂರನೆಯ ಮೈಸೂರು ಯುದ್ಧವನ್ನು ಟಿಪ್ಪುವಿನೊಂದಿಗೆ ಹೂಡಿಬಿಟ್ಟ. ನಿರೀಕ್ಷಿಸಿದ್ದ ಸೈನ್ಯ ಸಹಾಯ ಫ್ರೆಂಚರಿಂದ ದೊರೆಯದ ಕಾರಣದಿಂದ ಟಿಪ್ಪು ಯುದ್ಧದಲ್ಲಿ ಸೋತು ಶ್ರೀರಂಗಪಟ್ಟಣದ ಕೌಲಿಗೆ ಒಪ್ಪಬೇಕಾಯ್ತು. ಈ ಕೌಲಿನಲ್ಲಿ ಆತನ ಆತ್ಮಗೌರವಕ್ಕೆ ಕುಂದು ತರುವ ಷರತ್ತುಗಳಿದ್ದವು. ಆತನ ರಾಜ್ಯದ ಅರ್ಧ ಭಾಗ ಆಂಗ್ಲರಿಗೆ ಸೇರಿತು. ಮೂರು ಕೋಟಿ ಮೂವತ್ತು ಲಕ್ಷ ರೂಪಾಯಿಗಳು ಆತನ ಕೈ ಬಿಟ್ಟವು. ಆಂಗ್ಲರು, ಮರಾಠರು ಮತ್ತು ನಿಜಾಮ—ಇವರು ಈ ಲಾಭವನ್ನು ಹಂಚಿಕೊಂಡರು. ನೂರಾರು ವರುಷ ಗಳಿಂದಲೂ ತನ್ನದೇ ಆದ ಗೌರವಸ್ಥಾನ ಪಡೆದಿದ್ದ ಕರ್ನಾಟಕ ರಾಜ್ಯ ಒಡೆದು ಹಂಚಿ ಹೋಯ್ತು. ಟಿಪ್ಪುಸುಲ್ತಾನ್ ಈ ಅಪಮಾನವನ್ನು ಸಹಿಸ ದಾದ. ತೋರಿಕೆಗೆ ಆತನ ಆತ್ಮಗೌರವವು ಕುಂದಿತೇ ಹೊರತು ಅವನ ಹೃದಯದಲ್ಲಿ ಪ್ರಜ್ವಲಿಸುತ್ತಿದ್ದ ಸ್ವಾತಂತ್ರ್ಯಜ್ಯೋತಿ ಮಂಕಾಗಲಿಲ್ಲ. ಆಂಗ್ಲ ರನ್ನು ತನ್ನ ನಾಡಿನಿಂದ ತೊಲಗಿಸಲು ತೊಟ್ಟ ಆತನ ಪಣಕ್ಕೆ ಯುದ್ಧದಲ್ಲಿ

ಅನುಭವಿಸಿದ್ದ ಸೋಲು ಪುಟಕೊಟ್ಟಿತು. ಸ್ನೇಹ ಸಂಪಾದನೆಗಾಗಿ ಹೊಸ ಹೊಸ ಮಾರ್ಗಗಳ ಶೋಧನೆ ನಡೆಸಿದ. ಸಹಾಯವನ್ನು ಕೋರಿ ಆಫಗಾನಿಸ್ತಾನ್, ಪರ್ಷಿಯ, ಅರಬಸ್ತಾನ್ ಮುಂತಾದ ದೇಶಗಳಿಗೆ ರಾಯಭಾರಗಳನ್ನು ಕಳಿಸಿದ. ಫ್ರೆಂಚರನ್ನು ಮತ್ತೆ ನೆರವಿಗಾಗಿ ಒತ್ತಾಯಪಡಿಸಿದ. ಭಾರತದಲ್ಲಿದ್ದ ಆಂಗ್ಲರ ಶತ್ರುಗಳನ್ನು ಹುಡುಕಿ ಅವರೊಂದಿಗೆ ಪತ್ರವ್ಯವಹಾರ ನಡೆಸಿದ. ಪುಣೆ, ಹೈದರಾಬಾದ್, ದೆಹಲಿ, ಕಾಶ್ಮೀರ್ ರಾಜ್ಯಗಳಿಗೆ ನಿಯೋಗಗಳನ್ನು ಕಳಿಸಿದ. ಆದರೆ ಭಾರತದ ರಾಜರುಗಳನ್ನೆಲ್ಲ ಒಂದುಗೂಡಿಸಿ ಆಂಗ್ಲರನ್ನು ಭಾರತದ ಪುಣ್ಯಭೂಮಿಯಿಂದ ಹೊರಹಾಕಬೇಕೆಂಬ ಆತನ ಕೊನೆಯ ದೊಡ್ಡ ಯೋಜನೆ ಕನಸಾಗಿಯೇ ಉಳಿಯಿತು ! ಆಗ ಗವರ್ನರ್ ಜನರಲ್ ಆಗಿ ಬಂದಿದ್ದ ಲಾರ್ಡ್ ವೆಲ್ಲಸ್ಲಿ ಟಿಪ್ಪುವಿನ ಆಕಾಂಕ್ಷೆಯನ್ನು ಚೆನ್ನಾಗಿ ಅರಿತಿದ್ದ. ನಿಜಾಮ ಹಾಗೂ ಮರಾಠರೊಡಗೂಡಿ ನಾಲ್ಕನೆಯ ಮೈಸೂರು ಯುದ್ಧ ಹೂಡಿಯೇ ಬಿಟ್ಟ. ಹತಾಶನಾದರೂ ತನ್ನ ಧ್ಯೇಯಕ್ಕೆ ಅನುಚಿತ ರೀತಿಯಲ್ಲಿ ಟಿಪ್ಪು ವರ್ತಿಸಲಿಲ್ಲ. ತನ್ನ ಬಲವೆಲ್ಲವನ್ನೂ ಒಗ್ಗೂಡಿಸಿ ತಾಯ್ನಾಡಿನ ರಕ್ಷಣೆಗೆ ಸಜ್ಜುಗೊಂಡ. ಆದರೆ ದುರ್ದೈವದಿಂದ ಆತನ ಸೈನಿಕರೇ ಟಿಪ್ಪುವಿಗೆ ದ್ರೋಹ ಬಗೆದರು. ಯುದ್ಧದಲ್ಲಿ ಹೋರಾಡುತ್ತಲೇ ಟಿಪ್ಪು ವೀರ ಮರಣ ಹೊಂದಿದ. ಆಂಗ್ಲರಿಗೆ ಸಿಂಹಸ್ವಪ್ನವಾಗಿದ್ದ ಟಿಪ್ಪು ಕೊನೆಯ ವರೆಗೂ ತನ್ನ ಗುರಿ ಸಾಧಿಸಲು ಹೋರಾಡಿದ ಗಂಡುಗಲಿ ಎನಿಸಿದ.

## ಪಶ್ಚಿಮ ಭಾರತದಲ್ಲಿ

೧೯ನೆಯ ಶತಮಾನದ ಆರಂಭದಲ್ಲಿ ಆಂಗ್ಲರ ವಿರುದ್ಧವಾಗಿ ಪಶ್ಚಿಮ ಭಾರತದಲ್ಲೂ ಅನೇಕ ದಂಗೆಗಳೆದ್ದವು. ಪಶ್ಚಿಮ ಘಟ್ಟಗಳ ಗಿರಿಜನರು, ಕಛ್ ಜನರು, ಮೇರವಾರದ ಮೇರ್ ಜನಾಂಗದವರು ಆಂಗ್ಲರ ದಬ್ಬಾಳಿಕೆಯ ನೀತಿಯನ್ನು ಬಹಿರಂಗವಾಗಿ ಪ್ರತಿಭಟಿಸುತ್ತಿದ್ದರು. ಈ ದಂಗೆಗಳನ್ನೆಲ್ಲ ಆಂಗ್ಲರು ಶಸ್ತ್ರಾಸ್ತ್ರಗಳಿಂದಲೂ ಬುದ್ಧಿಯ ಚಾಕಚಕ್ಯತೆಯಿಂದಲೂ ಅಡಗಿಸಿ ಬಿಟ್ಟರು.

### ಪಂಜಾಬ್‌ನಲ್ಲಿ

ಪಾಟಿಯಾಲದ ಬದವಾರದಲ್ಲಿ ನಡೆದ ದಂಗೆಗೆ ಒಬ್ಬ ಭಿಕ್ಷುಕನು ಕಾರಣನಾದ. ಆ ಭಿಕ್ಷುಕ ತಾನು ಕಾಳೀದೇವತೆಯ ಅವತಾರವೆಂದೂ ಆಂಗ್ಲರನ್ನು ದೇಶದಿಂದ ಹೊರದೂಡುವುದೇ ತನ್ನ ಆಶಯವೆಂದೂ ಹೇಳಿಕೊಳ್ಳುತ್ತ ಆಂಗ್ಲರ ವಿರುದ್ಧವಾಗಿ ಬಂಡಾಯವೇಳಲು ಜನರನ್ನು ಪ್ರಚೋದಿಸತೊಡಗಿದ ! ಆಂಗ್ಲರು ಆತನನ್ನು ಬಂಧಿಸಿದಾಗ ಅಕಾಲಿಗಳ ನಾಯಕತ್ವದಲ್ಲಿ ದೊಡ್ಡ ಗುಂಪೇ ಸಿಡಿದೆದ್ದಿತು ! ಅವರನ್ನು ಒತ್ತಿ ಹಾಕುವುದರಲ್ಲಿ ಆಂಗ್ಲರಿಗೆ ಸಾಕು ಸಾಕಾಗಿ ಹೋಯ್ತು !

# ಕಿತ್ತೂರಿನ ಕ್ರಾಂತಿ

೧೯ನೆಯ ಶತಕದ ಪೂರ್ವಾರ್ಧದಲ್ಲಾದ ಕ್ರಾಂತಿಗಳಲ್ಲಿ ಅತ್ಯಂತ ಪ್ರಸಿದ್ಧವಾದುದು ಕಿತ್ತೂರಿನದು. ೧೮೫೭ರ ಸ್ವಾತಂತ್ರ್ಯ ಸಂಗ್ರಾಮಕ್ಕೂ ಪೂರ್ವದಲ್ಲಿ ಬ್ರಿಟಿಷ್ ಕಂಪನಿಯವರ ವಿರುದ್ಧವಾಗಿ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಕೀರ್ತಿ ಕರ್ನಾಟಕದ ಕಿತ್ತೂರು ಸಂಸ್ಥಾನಕ್ಕೆ ಮೀಸಲು. ಆಂಗ್ಲರ ವಿರುದ್ಧವಾಗಿ ಭಾರತದಲ್ಲಿ ಸಶಸ್ತ್ರ ಬಂಡಾಯ ಹೂಡಿದ ಪ್ರಥಮ ಮಹಿಳೆ ವೀರರಾಣಿ ಚೆನ್ನಮ್ಮ. ಈ ದೇಶಭಕ್ತೆ ಝಾಂಸೀರಾಣಿ ಲಕ್ಷ್ಮೀಬಾಯಿಗಿಂತ ಒಂದು ತಲೆಮಾರಿಗೆ ಮುಂಚೆಯೇ ಕ್ರಾಂತಿಯ ಕಹಳೆ ಊದಿದಳು.

ಕಿತ್ತೂರು ಸಂಸ್ಥಾನಾಧಿಪತಿ ಶಿವಲಿಂಗರುದ್ರರು ೧೮೨೪ರಲ್ಲಿ ತೀರಿಕೊಂಡರು. ಅವರಿಗೆ ಸಂತತಿಯಿಲ್ಲದ್ದರಿಂದ ತಮ್ಮ ವಂಶದ ಒಬ್ಬ ಬಾಲಕನನ್ನು ದತ್ತು ಸ್ವೀಕಾರ ಮಾಡಲು ಮೊದಲೆ ಗೊತ್ತುಮಾಡಿದ್ದರು. ಈ ಆಶಯವನ್ನು ಕಾರ್ಯರೂಪಕ್ಕೆ ತರುವ ಮೊದಲೆ ತೀರಿಕೊಂಡಿದ್ದರಿಂದ ರಾಣಿ ಚೆನ್ನಮ್ಮ ಅವರ ಅಪೇಕ್ಷೆಯನ್ನು ಈಡೇರಿಸಿ ರಾಜ್ಯ ಸೂತ್ರಗಳನ್ನು ತಾನೇ ವಹಿಸಿದಳು.

ಕಿತ್ತೂರಿನ ಭಾಗ್ಯಾಕಾಶದಲ್ಲಿ ಧೂಮಕೇತು ತಲೆದೋರಿತು. ಸ್ವಾರ್ಥ ಸಾಧನೆಯಲ್ಲಿ ತೊಡಗಿದ್ದ ಕೆಲವು ಹಿತಶತ್ರುಗಳು ಸಂಸ್ಥಾನದ ಶಾಂತವಾಗಿರುವ ನೀರನ್ನು ಕದಡಿ ಅದರಲ್ಲಿ ಮೀನು ಹಿಡಿಯುವ ಹವ್ಯಾಸಕ್ಕೆ ಬಿದ್ದರು. ಈ ಸಮಯಸಾಧಕರು ದತ್ತಪುತ್ರಸ್ವೀಕಾರದ ವಿಚಾರದಲ್ಲಿ ಸಂಶಯ ಹುಟ್ಟಿಸುವ ವರ್ತಮಾನವನ್ನು ಧಾರವಾಡದ ಕಲೆಕ್ಟರ್ ಥ್ಯಾಕರೆಗೆ ಮುಟ್ಟಿಸಿದರು. ಸಂಸ್ಥಾನದ ವ್ಯವಹಾರದಲ್ಲಿ ಪ್ರವೇಶಿಸಲು ಸಮಯ ಕಾಯುತ್ತಿದ್ದ ಥ್ಯಾಕರೆಗೆ ಸದವಕಾಶ ಒದಗಿತು. ತಕ್ಷಣವೆ ಚೆನ್ನಮ್ಮನಿಗೆ ಕಾಗದ ಬರೆದ. ದತ್ತಪುತ್ರ ಸ್ವೀಕಾರ ಕ್ರಮ-ಬದ್ಧವಾಗಿಲ್ಲವೆಂದೂ, ಮುಂಬಯಿ ಗವರ್ನರ್ ಕಡೆಯಿಂದ ಅನುಜ್ಞೆ ಪಡೆಯುವವರೆಗೆ ತಾನು ಕಳಿಸುತ್ತಿರುವ ಅಧಿಕಾರಿ ವೆಂಕಟರಾಯನ ಮೂಲಕ ಸಂಸ್ಥಾನದ

ವ್ಯವಹಾರಗಳನ್ನು ನಡೆಸಬೇಕೆಂದೂ ಆ ಕಾಗದದ ಒಕ್ಕಣೆಯಾಗಿತ್ತು. ಮುನ್ನೆಚ್ಚರಿಕೆಯ ಕ್ರಮವೆಂದು ಥ್ಯಾಕರೆ ಸಂಸ್ಥಾನದ ಬೊಕ್ಕಸವನ್ನು ಮೊಹರು ಮಾಡಿಸಿ ದುರ್ಗದ ಒಳಬಾಗಿಲಲ್ಲಿ ರಕ್ಷಣಾದಳವನ್ನಿರಿಸಿದ. ಇದರಿಂದ ಸ್ವಾಭಿಮಾನಿಯಾದ ರಾಣಿ ಚೆನ್ನಮ್ಮ ತಡವಿದ ಮಿಡಿನಾಗರದಂತೆ ಸಿಡಿಮಿಡಿಗೊಂಡಳು. ಸ್ವಾತಂತ್ರ್ಯಪ್ರಿಯಳೂ ಪರಾಕ್ರಮಿಯೂ ಆದ ಚೆನ್ನಮ್ಮ ತನ್ನ ಕಾಲ ಕೆಳಗೆ ಹುಲ್ಲು ಬೆಳೆಯಲು ಅವಕಾಶಕೊಡುವಳೆ? ತನ್ನ ಗುರುಗಳನ್ನೂ, ಸರದಾರರನ್ನೂ ಕರೆಸಿಕೊಂಡು ಸಮಾಲೋಚನೆ ನಡೆಸಿದಳು. ದಾಸ್ಯ ಮತ್ತು ಸ್ವಾತಂತ್ರ್ಯ-ಇವುಗಳಲ್ಲಿ ಯಾವುದನ್ನು ಆಯ್ದುಕೊಳ್ಳಬೇಕೆಂಬುದೇ ಮುಖ್ಯ ಪ್ರಶ್ನೆಯಾಗಿತ್ತು. ದೇಶದ ಸ್ವಾತಂತ್ರ್ಯವನ್ನೇ ಆಯ್ದು ಯುದ್ಧಸನ್ನಾಹಕ್ಕೆ ತೊಡಗಿದಳು. ಗಡಿದುರ್ಗಗಳಲ್ಲಿದ್ದ ದಂಡುಗಳನ್ನು ಕಿತ್ತೂರಿಗೆ ಕರೆಸಿದಳು. ನೆರೆಹೊರೆಯ ಹಳ್ಳಿಗಳ ಗೌಡರು ಮತ್ತು ಓಲೆಕಾರರುಗಳಿಗೆ ಆಮಂತ್ರಣ ಕಳಿಸಿದಳು.

ಇತ್ತ ಥ್ಯಾಕರೆ ಕಿತ್ತೂರಿಗೆ ಬಂದ. ಸಂಸ್ಥಾನದಲ್ಲಿ ಒಡಕು ಹುಟ್ಟಿ ಚೆನ್ನಮ್ಮನ ಅಧಿಕಾರಬಲ ಕುಗ್ಗುವುದೆಂಬ ನಂಬುಗೆ ಆತನಲ್ಲಿತ್ತು. ಸಂಸ್ಥಾನದ ಬೊಕ್ಕಸದ ಸುರಕ್ಷಿತತೆಯ ವಿಚಾರದಲ್ಲಿ ಅಲ್ಲಿಯ ಪ್ರಮುಖರು ಒಡಂಬಡಿಕೆಯ ಪತ್ರ ನೀಡಬೇಕೆಂದು ಥ್ಯಾಕರೆ ಬಲಾತ್ಕರಿಸಿದ. ಇದಕ್ಕೆ ಆ ಮುಖ್ಯರು ಒಪ್ಪಲಿಲ್ಲ. ಇದರಿಂದ ಕುಪಿತನಾದ ಥ್ಯಾಕರೆ ಈ ಬಗೆಗೆ ಚೆನ್ನಮ್ಮನನ್ನೇ ಕಾಣಲು ಅಪೇಕ್ಷಿಸಿದ. ಚೆನ್ನಮ್ಮ ತಾನು ಅಸ್ವಸ್ಥಳಿರುವುದಾಗಿ ಹೇಳಿ ಈ ಸಂದರ್ಶನಕ್ಕೆ ಒಪ್ಪಲಿಲ್ಲ. ಇದರಿಂದ ಮುಖಭಂಗಗೊಂಡ ಥ್ಯಾಕರೆ ಕಿತ್ತೂರು ಕೋಟೆಯ ಮಹಾದ್ವಾರಗಳಲ್ಲಿ ಫಿರಂಗಿಗಳನ್ನು ಇಡಿಸಿದ. ಇದರಿಂದ ಕೋಪಗೊಂಡ ಚೆನ್ನಮ್ಮ ದುರ್ಗದ ಬಾಗಿಲುಗಳನ್ನು ಮುಚ್ಚಿಸಿಬಿಟ್ಟಳು. ಕೋಟೆಯ ಬಾಗಿಲುಗಳನ್ನು ಫಿರಂಗಿಗಳಿಂದ ನುಚ್ಚುನೂರು ಮಾಡುವಂತೆ ಥ್ಯಾಕರೆ ತನ್ನ ಸೈನ್ಯಕ್ಕೆ ಆಜ್ಞೆಯಿತ್ತ. ಆದರೆ ಈ ಕಾರ್ಯಾಚರಣೆಯ ಮೊದಲೇ ಅವನ ಸೈನ್ಯದ ಮೂವರು ಮುಖ್ಯಾಧಿಕಾರಿಗಳು ಕಿತ್ತೂರು ಸೈನಿಕರಿಂದ ಕೊಲ್ಲಲ್ಪಟ್ಟರು. ಕೋಟೆಯೊಳಗೆ ಪ್ರವೇಶಿಸಲು ಯತ್ನಿಸುತ್ತಿದ್ದ ಥ್ಯಾಕರೆ ರಾಣಿಯ ಸೈನಿಕ

ನೊಬ್ಬನ ಗುಂಡಿಗೆ ಆಹುತಿಯಾದ. ಆಂಗ್ಲರ ಇತರ ಅನೇಕ ಸೈನಿಕರಿಗೂ ಇದೇ ಗತಿಯಾಯ್ತು. ಈ ಸೋಲು ಆಂಗ್ಲರನ್ನು ಚಿಂತೆಗೀಡುಮಾಡಿತು. ಬೆಳಗಾವಿ, ಮುಂಬಯಿ, ಸೊಲ್ಲಾಪುರ, ಬಳ್ಳಾರಿ ಮುಂತಾದವುಗಳಿಂದ ತಮ್ಮ ಸೈನ್ಯಗಳನ್ನು ಒಟ್ಟುಗೂಡಿಸಿ ಕಿತ್ತೂರಿಗೆ ಕಳಿಸಿದರು. ಕಿತ್ತೂರಿನವರೋ ಮಹಾ ಸ್ವಾಭಿಮಾನಿಗಳು. ಸತ್ತರೂ ಚಿಂತೆಯಿಲ್ಲ, ಶರಣಾಗತರಾಗೆವು–ಎಂಬುದೇ ಅಲ್ಲಿನವರ ಯುದ್ಧಘೋಷವಾಯ್ತು. ಅದೋ! ಚೆನ್ನಮ್ಮ ಯುದ್ಧದ ಸೇನಾಧಿಪತ್ಯವನ್ನು ತಾನೇ ವಹಿಸಿದಳು. ಘೋರಕದನವೇ ಆರಂಭವಾಯ್ತು. ಎಲ! ಇದೇನಾಯ್ತು? ಅಯ್ಯೋ, ಆಂಗ್ಲರ ಕುತಂತ್ರವೇ! ಲಂಚ ತಿಂದ ವಿಶ್ವಾಸಘಾತಕರ ಕೈವಾಡದಿಂದ ಮದ್ದಿನಲ್ಲಿ ಸಗಣಿಯ ಬೆರಕೆಯಾಗಬೇಕೆ? ಕಿತ್ತೂರ ತೋಪುಗಳು ಹಾರಲಿಲ್ಲ. ಕಿತ್ತೂರ ಸೈನಿಕರು ಜೀವದ ಹಂಗುದೊರೆದು ಹೋರಾಡಿದರೂ ಸುಸಜ್ಜಿತ ಆಂಗ್ಲಸೇನೆಯ ಮುಂದೆ ನಿಲ್ಲಬಲ್ಲರೆ ? ಕಿತ್ತೂರ ಕೋಟೆಯೊಂದಿಗೆ ಸಂಸ್ಥಾನವೂ ಆಂಗ್ಲರ ಕೈವಶವಾಯ್ತು. ರಾಣಿ ಚೆನ್ನಮ್ಮ ಸೆರೆಸಿಕ್ಕು ಬೈಲುಹೊಂಗಲ ಕೋಟೆಯಲ್ಲಿ ಬಂದಿಯಾದಳು. ಬಂಧನದ ಐದು ವರ್ಷಗಳಕಾಲವನ್ನು ಶಿವಭಕ್ತಿಯಲ್ಲಿ ಕಳೆದ ಚೆನ್ನಮ್ಮ ೧೮೨೯ರಲ್ಲಿ ಶಿವೈಕ್ಯಹೊಂದಿದಳು.

ಕಿತ್ತೂರು ಕೈಬಿಟ್ಟರೂ ಆಂಗ್ಲರ ವಿರುದ್ಧ ಹೊತ್ತಿದ ಕ್ರಾಂತಿಯ ಉರಿ ಆರಲಿಲ್ಲ. ಚೆನ್ನಮ್ಮನ ತರುವಾಯ ಬಂದ ಕ್ರಾಂತಿಕಾರರಿಗೆ 'ಸ್ವಾತಂತ್ರ್ಯ ಇಲ್ಲವೇ ಸ್ವರ್ಗ' ಎಂಬ ಆಕೆಯ ವೀರಸಂದೇಶ ನಿರಂತರ ಸ್ಫೂರ್ತಿದಾಯಕವಾಯ್ತು. ಭಾರತದ ಸ್ವಾತಂತ್ರ್ಯಸಮರದ ಇತಿಹಾಸದಲ್ಲಿ ರಾಣಿ ಚೆನ್ನಮ್ಮನ ಹೆಸರು ಅಜರಾಮರವಾಗಿದೆ.

## ಸಂಗೊಳ್ಳಿ ರಾಯಣ್ಣ

ರಾಯಣ್ಣನದೊಂದು ವೀರಕಥೆ. ಸಂಗೊಳ್ಳಿಯ ಚೌಕೀದಾರನಾಗಿದ್ದ ಇವನು ಕಿತ್ತೂರ ಸೈನ್ಯದಲ್ಲಿ ಸೇರ್ಪಡೆಯಾಗಿ ಚೆನ್ನಮ್ಮನ ಬಂಡಾಯದಲ್ಲಿ ಪಾಲ್ಗೊಂಡಿದ್ದ. ಕಿತ್ತೂರ ಕೋಟೆ ಬಿತ್ತು. ರಾಯಣ್ಣ ನೂರಾರು ಸೈನಿಕ



ಕಿತ್ತೂರು ಚೆನ್ನಮ್ಮ

ರೊಡನೆ ಸೆರೆಸಿಕ್ಕು ಬಂಧಿತನಾದ. ಸೆರೆಯಿಂದ ಬಿಡುಗಡೆಹೊಂದಿ ಸಂಗೊಳ್ಳಿಗೆ ಮರಳಿಬಂದಾಗ ಕಂಪನಿ ಸರಕಾರವು ಆತನ ಸೇವಾ ಜಮೀನನ್ನು ಮುಟ್ಟು ಗೋಲು ಹಾಕಿತ್ತು. ಬಡವನಾದ ರಾಯಣ್ಣ ಇದನ್ನರಿತು ಸಂತಪ್ತನಾದ. ಕಂಪನಿ ಸರಕಾರದ ಮೇಲಿನ ಆತನ ದ್ವೇಷ ಇಮ್ಮಡಿಸಿತು. ಕಿತ್ತೂರು ಸಂಸ್ಥಾನವನ್ನು ಹೇಗಾದರೂ ಆಂಗ್ಲರ ಹಿಡಿತದಿಂದ ಬಿಡುಗಡೆಮಾಡಬೇಕೆಂಬ ಆತನ ಪ್ರತಿಜ್ಞೆ ಇನ್ನಷ್ಟು ದೃಢಪಟ್ಟಿತು.

ಚೆನ್ನಮ್ಮ ದತ್ತುಸ್ವೀಕರಿಸಿದ್ದ ಶಿವಲಿಂಗಪ್ಪನನ್ನು ಕಿತ್ತೂರ ಗಾದಿ ಗೇರಿಸುವ ಪಣ ರಾಯಣ್ಣನದಾಗಿತ್ತು. ಈ ಉದ್ದೇಶಸಾಧನೆಗಾಗಿ ರಾಯಣ್ಣ ಶೂರ ಹೋರಾಟಗಾರರನ್ನು ಕಲೆಹಾಕಿ ೧೮೩೦ರಲ್ಲಿ ಆಂಗ್ಲರ ವಿರುದ್ಧವಾಗಿ 'ಕಪಿಯುದ್ಧ' ಆರಂಭಿಸಿದ. ಕಿತ್ತೂರಲ್ಲಿ ನಡೆದಿದ್ದ ಕಂಪನಿಯವರ ಆಳ್ವಿಕೆಯನ್ನು ಅಸ್ತವ್ಯಸ್ತಗೊಳಿಸಲು ಭಯೋತ್ಪಾದಕ ಸಾಹಸಗಳಲ್ಲಿ ತೊಡಗಿದ. ಸರಕಾರೀ ಕಚೇರಿಗಳನ್ನು ಸುಡುವುದು, ಕಂಪನಿ ಸೈನ್ಯಠಾಣೆಗಳ ಮೇಲೆ ಹಠಾತ್ತಾಗಿ ಬೀಳುವುದು, ಸರಕಾರದ ಬೊಕ್ಕಸವನ್ನು ಲೂಟಿಮಾಡುವುದು, ಆಂಗ್ಲರಿಗೆ ನೆರವುನೀಡುತ್ತಿದ್ದ ಜನರನ್ನು ಗೊತ್ತುಪಡಿಸಿ ಕೊಲ್ಲುವುದು—ಇವೇ ಮೊದಲಾದುವು ಆತನ ಮುಖ್ಯ ಚಟುವಟಿಕೆಗಳಾದವು. ಕೂಡಲೆ ರಾಯಣ್ಣನ ಹೆಸರು ಕಿತ್ತೂರು ಸಂಸ್ಥಾನದ ತುಂಬ ಹರಡಿತು. ದೇಶಾಭಿಮಾನಿಗಳ ದೊಡ್ಡದೊಂದು ಗುಂಪು ಆತನಿಂದ ಸಂಘಟಿತವಾಯ್ತು. ರಾಯಣ್ಣನ ಉಪಟಳ ದಿನ ದಿನಕ್ಕೆ ಹೆಚ್ಚುತ್ತ ಸಾಗಿ ಆಂಗ್ಲರಿಗೆ ದಿಗ್ಭ್ರಮೆ ಹುಟ್ಟಿಸಿತು. ಸಂಸ್ಥಾನದಲ್ಲಿ ಎಲ್ಲೆಲ್ಲೂ ಅಶಾಂತತೆಯ ತಾಂಡವನೃತ್ಯ! ಕಂಪನಿಯ ಅಧೀನದಲ್ಲಿದ್ದ ಕಿತ್ತೂರಿನ ಪ್ರಜಾಸೈನ್ಯ ರಾಯಣ್ಣನ ವಿರುದ್ಧವಾಗಿ ಹೋರಾಡಲು ನಿರಾಕರಿಸಿತು. ಆಗ ಕಾಯ್ದಿಟ್ಟ ಸೈನ್ಯವನ್ನೇ ಕರೆಸಬೇಕಾಯ್ತು. ಆಂಗ್ಲರ ಕಣ್ಣು ತಪ್ಪಿಸಿ ಅಕಸ್ಮಾತ್ತಾಗಿ ದಾಳಿಯಿಟ್ಟು ದಂಗುಬಡಿಸುತ್ತಿದ್ದ ರಾಯಣ್ಣನನ್ನು ನಿಗ್ರಹಿಸುವುದು ಯಾವ ಸೈನ್ಯಕ್ಕೂ ಸಾಧ್ಯವಾಗಲಿಲ್ಲ.

ಆಗ ಆಂಗ್ಲರು ಭೇದನೀತಿಗೆ ತೊಡಗಿದರು. ರಾಣಿ ಚೆನ್ನಮ್ಮ ತನ್ನ ಮಗನನ್ನು ದತ್ತುಮಾಡಿಕೊಳ್ಳಲಿಲ್ಲವೆಂದು ಖುದಾನಪುರದ ಲಿಂಗನಗೌಡನಿಗೆ

ಕಿತ್ತೂರು ದೇಸಗತ್ತಿಯ ಮೇಲೆ ಸಿಟ್ಟಿತ್ತು. ಲಿಂಗನಗೌಡನ ಈ ಅಸಾಮಾಧಾನದ ದುರ್ಲಾಭ ಪಡೆಯಲು ಆಂಗ್ಲರು ಯತ್ನಿಸಿದರು. ಕಿತ್ತೂರ ಸ್ವಾತಂತ್ರ್ಯಕ್ಕಿಂತ ಸ್ವಹಿತಸಾಧನೆಯೇ ಲೇಸೆಂದು ಬಗೆದ ಲಿಂಗನಗೌಡ ಆಂಗ್ಲರ ಕುಟಿಲ ಸಲಹೆಗೆ ಒಪ್ಪಿಕೊಂಡ. ಈ ದೇಶದ್ರೋಹಿ ದೇಶಪ್ರೇಮಿಯೆಂದು ನಟಿಸಿ ಮುನ್ನೂರು ಜನ ಸೈನಿಕರೊಂದಿಗೆ ಬಂದು ರಾಯಣ್ಣನ ಬಂಡಾಯವನ್ನು ಕೂಡಿಕೊಂಡ. ಲಿಂಗಣ್ಣನು ರಾಯಣ್ಣನ ಹಿರಿಯ ಸಂಬಂಧಿಕನೇ ಆಗಿದ್ದರಿಂದ ಆತನ ಮೇಲೆ ರಾಯಣ್ಣನಿಗೆ ಯಾವ ಸಂಶಯವೂ ಹುಟ್ಟಲಿಲ್ಲ. ಲಿಂಗನಗೌಡನಿಗೆ ನೆರವು ನೀಡಲು ನೇಗಿನಹಾಳ ವೆಂಕನಗೌಡನನ್ನೂ ಇನ್ನಿತರ ಗುಪ್ತಚಾರರನ್ನೂ ಆತನ ಸೈನ್ಯದಲ್ಲಿ ಸೇರಿಸಲಾಗಿತ್ತು. ಹದಿನೈದು ದಿನಗಳವರೆಗೆ ರಾಯಣ್ಣನ ಬಂಡಾಯದ ಕಾರ್ಯದಲ್ಲಿ ಇವರೆಲ್ಲರೂ ಕೂಡಿಯೇ ಕೆಲಸಮಾಡಿದರು.

ಒಂದು ದಿನ ರಾಯಣ್ಣ ತನ್ನ ಬಟ್ಟೆಗಳನ್ನೂ, ಶಸ್ತ್ರಾಸ್ತ್ರಗಳನ್ನೂ ಬದಿಗಿರಿಸಿ ಸ್ನಾನಕ್ಕೆಂದು ಹೋದಾಗ ನೇಗಿನಹಾಳ ಓಲೆಕಾರ ಲಕ್ಕಪ್ಪ ಹಿಂದಿನಿಂದ ಹೋಗಿ ರಾಯಣ್ಣನನ್ನು ತೆಕ್ಕೆಬಿದ್ದು ಹಿಡಿದ. ಕೂಡಲೇ ಅಲ್ಲಿಯೇ ಇದ್ದ ಲಿಂಗನಗೌಡ ಮತ್ತು ವೆಂಕನಗೌಡ ಮೊದಲಾದವರು ರಾಯಣ್ಣನನ್ನು ಹೆಡಮುರಿಗೆ ಕಟ್ಟಿ ಒಳ್ಳೆಯ ಬೇಟೆಯನ್ನು ಹಿಡಿದು ತಂದಂತೆ ಧಾರವಾಡಕ್ಕೆ ಮೆರವಣಿಗೆಯಲ್ಲಿ ಒಯ್ದರು. ಹಲವು ಕಾಲ ಸ್ವಾತಂತ್ರ್ಯಸಂಗ್ರಾಮಜ್ಯೋತಿಯನ್ನು ಉಜ್ವಲವಾಗಿ ಹೊತ್ತಿಸಿದ್ದ ಸಾಹಸಿಯಾದ ರಾಯನಾಯಕ ಕೊನೆಯಲ್ಲಿ ತನ್ನವರ ವಿಶ್ವಾಸಘಾತದಿಂದಲೇ ಶತ್ರುವಿನ ಕೈಗೆ ಸಿಕ್ಕುಬಿದ್ದ.

ನಂದಗಡದಲ್ಲಿ ರಾಯಣ್ಣನನ್ನು ಜನರ ಸಮ್ಮುಖದಲ್ಲೇ ಗಲ್ಲಿಗೇರಿಸಿದರು. ನಂದಗಡದ ಊರೊಳಗಿಂದ ಗಲ್ಲಿನ ಸ್ಥಳಕ್ಕೆ ಒಯ್ಯುವಾಗ ರಾಯಣ್ಣ ಶಾಂತಚಿತ್ತನಾಗಿದ್ದ. ನಗುನಗುತ್ತಲೇ ಮರಣದಂಡನೆಯನ್ನು ಸ್ವಾಗತಿಸಿದ. ನೇಣುಹಗ್ಗದ ಕುಣಿಕೆಯನ್ನು ತನ್ನ ಕೈಯಿಂದಲೇ ಬಿಗಿಮಾಡಿಕೊಂಡು ಮಾತೃಭೂಮಿಗೆ ಆತ್ಮಬಲಿದಾನ ಮಾಡಿದ ಸ್ವಾತಂತ್ರ್ಯಯೋಧ ಸಂಗೊಳ್ಳಿ ರಾಯಣ್ಣ. ರಾಯಣ್ಣನ ಇಚ್ಛೆಯಂತೆ ಆತನ ಅಂತ್ಯಸಂಸ್ಕಾರ ನಡೆದ ಸ್ಥಳದಲ್ಲಿ ಒಂದು

ಆಲದಮರ ಬೆಳೆದಿದೆ. ಹತ್ತಿರದಲ್ಲೇ ಆತನ ವಿಗ್ರಹವೊಂದನ್ನು ಸ್ಥಾಪಿಸಿ ಗುಡಿಕಟ್ಟಿದ್ದಾರೆ. ರಾಯನಾಯಕನ ಶೌರ್ಯಸಾಹಸಗಳನ್ನೂ, ಸ್ವಾತಂತ್ರ್ಯಪ್ರೇಮವನ್ನೂ ಜನರಿಂದಿಗೂ ಲಾವಣಿ ರೂಪದಲ್ಲಿ ಹಾಡಿ ಕೊಂಡಾಡುತ್ತಾರೆ. ಮಕ್ಕಳಿಲ್ಲದ ಹೆಣ್ಣುಮಕ್ಕಳು ರಾಯಣ್ಣನ ಆಲದಮರಕ್ಕೆ ನಡೆದುಕೊಳ್ಳುತ್ತಾರೆ. ಅವನಂಥ ಶೂರ ಮಗನೇ ತಮಗಾಗಬೇಕೆಂದು ಆತನ ವಿಗ್ರಹದ ಮುಂದೆ ನಿಂತು ಪ್ರಾರ್ಥಿಸುತ್ತಾರೆ. ಭಾರತದ ಸ್ವಾತಂತ್ರ್ಯ ಸಮರಗಳ ಇತಿಹಾಸದಲ್ಲಿ ಸಂಗೊಳ್ಳಿ ರಾಯಣ್ಣನ ಹೆಸರು ಸುವರ್ಣಾಕ್ಷರಗಳಿಂದ ರೇಖಿಸಲ್ಪಟ್ಟಿದೆ !

# ಸಾತಾರೆಯ ದಂಗೆ

ಕಂಪನಿ ಸರಕಾರದ ರಾಜ್ಯದಾಹವು ಸಾತಾರೆಯ ದಂಗೆಗೂ ಕಾರಣವಾಯ್ತು. ಶಿವಾಜಿಯ ವಂಶಸ್ಥನಾದ ಪ್ರತಾಪಸಿಂಹನು ೧೮೧೮ರಲ್ಲಿ ಪಟ್ಟಕ್ಕೆ ಬಂದ. ಶೀರ ಸಂಭಾವಿತನಾಗಿದ್ದ ಈತನನ್ನು ಪೇಶ್ವೆ ವಂಶದ ೨ನೆಯ ಬಾಜೀರಾಯನು ತನ್ನ ಹತೋಟಿಯಲ್ಲಿರಿಸಿಕೊಳ್ಳಲು ಯತ್ನಿಸಿದ. ಆಗ ಪ್ರತಾಪಸಿಂಹನು ಆಂಗ್ಲರ ನೆರವು ಕೋರಿದ. ಪೂರ್ವಿಕರ ಸಿಂಹಾಸನವನ್ನು ಈತನಿಗೆ ದೊರಕಿಸಿ ಕೊಡುವ ಆಶ್ವಾಸನವಿತ್ತು ಆಂಗ್ಲರು ಬಾಜೀರಾಯನೊಡನೆ ಹೂಡಿದ ಯುದ್ಧದಲ್ಲಿ ಈತನಿಂದ ಎಲ್ಲ ಸಹಾಯ ಪಡೆದರು. ಬಾಜೀರಾಯ ಸೋತಮೇಲೆ ಆ ರಾಜ್ಯದ ಸ್ವಲ್ಪ ಭಾಗವನ್ನು ಮಾತ್ರ ಕೊಡುವುದಾಗಿ ಪ್ರತಾಪಸಿಂಹನಿಗೆ ಕಂಪನಿ ಸರಕಾರ ತಿಳಿಸಿತು. ಭಾಷೆಗೆ ತಪ್ಪಿದ ಆಂಗ್ಲರ ಕೊಡುಗೆಯನ್ನು ಪ್ರತಾಪಸಿಂಹ ತಿರಸ್ಕರಿಸಿದ. ಈ ಕೊಡುಗೆಯನ್ನು ಒಪ್ಪಬೇಕೆಂದು ಆತನ ಮೇಲೆ ಆಂಗ್ಲರು ಒತ್ತಾಯ ಹೇರಿದರು. ಸಾತ್ವಿಕನೂ ಸ್ವಾಭಿಮಾನಿಯೂ ಆಗಿದ್ದ ಪ್ರತಾಪಸಿಂಹನು ಅದಕ್ಕೊಪ್ಪಲಿಲ್ಲ.

ಇಲ್ಲದ ಸಲ್ಲದ ಆರೋಪಗಳನ್ನು ಆತನ ಮೇಲೆ ಹೊರಿಸಿ ಆತನನ್ನು ಪಟ್ಟದಿಂದ ತಳ್ಳಿ ದೇಶಭ್ರಷ್ಟನೆಂದು ಘೋಷಿಸಿದರು. ಪ್ರತಾಪಸಿಂಹನ ಪ್ರಜಾವರ್ಗದಲ್ಲಿ ಕ್ಷೋಭೆಯುಂಟಾಯ್ತು. ಜನ ದಂಗೆಯೆದ್ದರು. ಆಂಗ್ಲರು ಈ ದಂಗೆಗಳನ್ನು ಹತ್ತಿಕ್ಕಿದರೂ ಜನತೆಯಲ್ಲಿ ಹೊತ್ತಿದ್ದ ಅಶಾಂತಿಯ ಉರಿ ಆರಲೇ ಇಲ್ಲ.

ಹೀಗೆ ೧೯ನೆಯ ಶತಮಾನದ ಮಧ್ಯದ ಸುಮಾರಿಗೆ ಕಂಪನಿ ಸರಕಾರದ ಆಡಳಿತ ದೇಶದ ತುಂಬೆಲ್ಲ ಹರಡಿ ಭದ್ರವಾಗಿ ನೆಲಸಿತು. ಇದರ ಪರಿಣಾಮವಾಗಿ ಆಂಗ್ಲರ ವಿರುದ್ಧವಾಗಿ ಎಲ್ಲಾ ವರ್ಗಗಳ ಜನರೂ ಬಹಿರಂಗವಾಗಿ ದಂಗೆ ಹೂಡುವುದು ಸರ್ವಸಾಮಾನ್ಯವಾಯ್ತು. ಒಳಜಗಳಗಳಿಂದ ಬೇಸತ್ತು ನಿರ್ವಿಣ್ಣ

ರಾಗಿದ್ದ ಜನ ಕಂಪನಿಯ ಆಡಳಿತದಲ್ಲಿ ತಮ್ಮ ಹಿತರಕ್ಷಣೆಯುಂಟೆಂದು ಭ್ರಮಿಸಿ ಆಂಗ್ಲರನ್ನು ಸ್ವಾಗತಿಸಿದ್ದರಷ್ಟೆ? ಈಗ ಹಿಂದೂ-ಮುಸಲ್ಮಾನರಿಬ್ಬರೂ ಆಂಗ್ಲರ ಆಳಿಕೆಯಿಂದ ನಿರಾಶೆಗೊಂಡರು. ಸ್ವಾತಂತ್ರ್ಯದ ಬೆಲೆ ಏನೆಂಬುದರ ಅರಿವು ಅವರಿಗೀಗ ಚೆನ್ನಾಗಿ ಆಯ್ತು. ಅದನ್ನು ಮರಳಿ ಪಡೆಯಲು ಎಂತಹ ತ್ಯಾಗಕ್ಕೂ ಜನ ಸಿದ್ಧರಾದರು. ಜನತೆಯಲ್ಲಿ ಅತೃಪ್ತಿ-ಅಸಮಾಧಾನಗಳು ಪರಮಾವಧಿಯನ್ನು ಮುಟ್ಟಿದ್ದವು. ಕ್ಷೋಭೆಯ ಕಿಚ್ಚು ಹೊಗೆಯಾಡತೊಡಗಿತ್ತು.

# ೨. ಪ್ರಥಮ ಸ್ವಾತಂತ್ರ್ಯ ಸಂಗ್ರಾಮ

## ದತ್ತಪುತ್ರಾಧಿಕಾರ ರದ್ದತಿ

ಕಂಪನಿ ಸರಕಾರಕ್ಕೆ ಇನ್ನೂ ಸ್ವಾಧೀನವಾಗದ ದೇಶೀಯ ರಾಜ್ಯಗಳನ್ನು ಕಬಳಿಸಲು ೧೮೪೮ರಲ್ಲಿ ಗವರ್ನರ್ ಜನರಲ್ ಆದ ಡಾಲ್‌ಹೌಸಿ ರೂಪಿಸಿದ ನೀತಿ ದತ್ತಪುತ್ರಾಧಿಕಾರ ರದ್ದತಿ: ಹಿಂದೂ ಸಂಪ್ರದಾಯದಂತೆ ಆಳುವ ಅರಸು ಸಂತತಿ ಹೀನನಾದಾಗ ಬೇರೆಯವರ ಮಗನನ್ನು ದತ್ತಕ ಮಾಡಿಕೊಂಡು ತನ್ನ ತರುವಾಯ ಆತನನ್ನು ಪಟ್ಟಕ್ಕೆ ಅಧಿಕಾರಿಯನ್ನಾಗಿ ಮಾಡುವುದು ಪ್ರಾಚೀನ ಕಾಲದಿಂದ ನಡೆದು ಬಂದ ಪದ್ಧತಿ. ಬ್ರಿಟಿಷ್ ಸರಕಾರ ಈ ಪದ್ಧತಿಯನ್ನು ಮಾನ್ಯ ಮಾಡಿತ್ತು. ಬ್ರಿಟಿಷ್ ಸರಕಾರದ ಒಪ್ಪಿಗೆ ಪಡೆದು ಈ ಹಕ್ಕನ್ನು ಕಾರ್ಯಗತ ಮಾಡಬೇಕು ಎಂದೂ ಸೂಚಿಸಲಾಗಿತ್ತು. ಆದರೂ ಬ್ರಿಟಿಷ್ ಸರಕಾರ ಮನಬಂದಂತೆ ತೀರ್ಮಾನಿಸುತ್ತ, ದೇಶೀಯ ಸಂಸ್ಥಾನಗಳನ್ನು ಯಾವುದಾದರೂ ನೆವದಿಂದ ತನ್ನ ರಾಜ್ಯಕ್ಕೆ ಒಳಪಡಿಸಿಕೊಳ್ಳುತ್ತಿತ್ತು.

## ಸಂಸ್ಥಾನಗಳ ಸೇರ್ಪಡೆ

ಸಾತಾರೆಯ ರಾಜ ಆಂಗ್ಲರ ಅನುಮತಿಯಿಲ್ಲದೆ ದತ್ತಕ ಮಾಡಿಕೊಂಡಿದ್ದ. ೧೮೪೮ರಲ್ಲಿ ಆತ ತೀರಿಕೊಂಡ ಮೇಲೆ, ಆ ರಾಜ್ಯವನ್ನು ಕಂಪನಿಯ ವಶಕ್ಕೆ ತೆಗೆದುಕೊಳ್ಳಲಾಯ್ತು.

ಝಾನ್ಸಿಯ ರಾಜ ತಾನು ದತ್ತಪುತ್ರ ಸ್ವೀಕಾರ ಮಾಡುವುದಾಗಿ ಸರಕಾರಕ್ಕೆ ತಿಳಿಸಿದ್ದ. ದತ್ತಕ ಸ್ವೀಕಾರ ಸಮಾರಂಭ ನೆರವೇರಿಸಿದ ಮರುದಿನವೇ

ತೀರಿಕೊಂಡಿದ್ದ. ಡಾಲ್‌ಹೌಸಿ ಆ ದತ್ತಕವನ್ನು ಮಾನ್ಯ ಮಾಡಲಿಲ್ಲ. ಝಾಂಸಿ ರಾಜ್ಯ ಕಂಪನಿ ಸರಕಾರಕ್ಕೆ ಸೇರ್ಪಡೆಯಾಯ್ತು.

ಸಂಬಲ್‌ಪುರ, ನಾಗಪುರಗಳ ರಾಜರು ಗಂಡು ಮಕ್ಕಳಿಲ್ಲದೆ ತೀರಿಕೊಂಡಿದ್ದರು. ಇವೆರಡನ್ನೂ ಕಂಪನಿ ರಾಜ್ಯಕ್ಕೆ ಸೇರಿಸಲಾಯ್ತು.

ಹೀಗೆ ಒಂದಾದಮೇಲೊಂದರಂತೆ ದೇಶೀಯ ರಾಜ್ಯಗಳನ್ನು ವಶಪಡಿಸಿಕೊಳ್ಳುವ ಅನ್ಯಾಯದ ರಾಜಕೀಯ ನಿರಂತರವಾಗಿ ನಡೆಯಿತು. ಅಲ್ಲದೆ ಈ ರಾಜ್ಯಗಳನ್ನು ವಶಪಡಿಸಿಕೊಳ್ಳುವಾಗ ಅನುಸರಿಸುತ್ತಿದ್ದ ವಿಧಾನವು ತುಂಬ ಹೇಯವಾಗಿತ್ತು : ನಾಗಪುರವನ್ನು ವಶಪಡಿಸಿಕೊಂಡಾಗ ರಾಜರ ಸ್ವಂತದ ಆಸ್ತಿಪಾಸ್ತಿಗಳನ್ನು ಅಂತಃಪುರದ ರಾಣಿಯರು ಅನುಭೋಗಿಸುವುದನ್ನು ಡಾಲ್‌ಹೌಸಿ ಸಹಿಸಲಿಲ್ಲ. ಅರಮನೆಯ ಆ ಆಸ್ತಿಯನ್ನೆಲ್ಲ ಜಪ್ತಿಮಾಡಿಬಿಟ್ಟ. ರಾಣಿಯರ ಲಕ್ಷಾಂತರ ರೂಪಾಯಿಗಳ ಆಭರಣಗಳನ್ನು ಕಲ್ಕತ್ತೆಯ ಪೇಟೆಗೆ ಸಾಗಿಸಿ ಹರಾಜು ಮಾಡಿಸಿದ. ಅರಮನೆಯ ಕುರ್ಚಿ-ಮೇಜುಗಳನ್ನೂ ಕೂಡ ಹರಾಜು ಮಾಡಲಾಯ್ತು. ಉಟ್ಟ ವಸ್ತ್ರಗಳ ಮೇಲೆ ಭೋಸ್ಲೆ ಮನೆತನದವರು ಅರಮನೆಬಿಟ್ಟು ಹೊರಡಬೇಕಾಯ್ತು ! ಭೋಸ್ಲೆ ಅರಸರ ಆನೆ, ಕುದುರೆ, ಒಂಟೆ, ದನಕರು ಮೊದಲಾದವೆಲ್ಲವನ್ನೂ ಮಾರಾಟಮಾಡಲಾಯ್ತು. ಒಂದು ನೂರು ರೂಪಾಯಿ ಬೆಲೆ ಬರುವ ದನಕರುಗಳನ್ನು ಐದೈದು ರೂಪಾಯಿಗಳಿಗೆ ಎಂದರೆ ಅವುಗಳ ಮಾಂಸದ ಬೆಲೆಗೆ ಮಾರಾಟ ಮಾಡಿದರು. ಈ ಜಾಹೀರು ಹರಾಜಿನಿಂದ ರಾಜಮನೆತನದವರಿಗಾದ ಅವಮಾನ ಸಹಿಸಲಾರದಷ್ಟಾಯ್ತು. ಸೌಮ್ಯತೆ ಹಾಗೂ ಬುದ್ಧಿವಂತಿಕೆಗೆ ಹೆಸರಾಗಿದ್ದ ರಾಜನ ಅಜ್ಜಿ ತನ್ನ ರಾಜಮನೆತನಕ್ಕೆ ಒದಗಿದ್ದ ಈ ವಿಪತ್ತನ್ನು ಕಂಡು ಉದ್ರೇಕಗೊಂಡು ಅರಮನೆಯ ಪೀಠೋಪಕರಣಗಳಿಗೆ ಕೈ ಹಚ್ಚಿದರೆ ಅರಮನೆಗೇ ಬೆಂಕಿ ಇಡುವುದಾಗಿ ಬೆದರಿಕೆ ಹಾಕಿದಳು ! ಆದರೂ ನಡೆಯಬೇಕಾಗಿದ್ದ ಅನಾಹುತವೆಲ್ಲ ನಡೆದೇಹೋಯ್ತು. ನಾಗಪುರದ ಈ ದುರಂತದಿಂದ ಬಿರಾರ್ ಮತ್ತು ನಾಗಪುರದ ಸುತ್ತುಮುತ್ತಲಿನ ರಾಜಮನೆತನದವರು ತುಂಬ ಕಳವಳಗೊಂಡರು.

ಡಾಲ್‌ಹೌಸಿಯ ಈ ಧೋರಣೆಯ ಪರಿಣಾಮವಾಗಿ ಕರ್ನಾಟಕ, ಬೇರಾರ್, ತಂಜಾವೂರು, ಔಧ್, ಪಂಜಾಬು ಮುಂತಾದ ರಾಜ್ಯಗಳು ಕಂಪನಿ ಸರಕಾರಕ್ಕೆ ಸೇರ್ಪಡೆಯಾದವು. ರಾಜ್ಯ ಕಳೆದುಕೊಂಡು ಮುಖಭಂಗಿತರಾದ ರಾಜರೇ ೧೮೫೭ರ ಸ್ವಾತಂತ್ರ್ಯಯುದ್ಧದ ನಾಯಕರಾದರು.

# ಝಾಂಸಿ ಲಕ್ಷ್ಮೀಬಾಯಿ

ಆಂಗ್ಲರ ದಬ್ಬಾಳಿಕೆಗೆ ತುತ್ತಾಗಿ ತಮ್ಮ ರಕ್ತಾರ್ಪಣದಿಂದ ಸ್ವಾತಂತ್ರ್ಯ ದೇವತೆಗೆ ವೀರತಿಲಕವಿಟ್ಟು ನಾಂದಿಹಾಡಿದವರಲ್ಲಿ ಝಾಂಸಿ ಲಕ್ಷ್ಮೀಬಾಯಿ ಅಗ್ರಪಂಕ್ತಿಗೆ ಸೇರಿದ್ದಾಳೆ.

೧೪ನೆಯ ವಯಸ್ಸಿನಲ್ಲಿಯೇ ಈಕೆಯ ವಿವಾಹ ಝಾಂಸಿ ಮಹಾರಾಜ ಗಂಗಾಧರರಾಯನೊಂದಿಗೆ ಆಗಿತ್ತು. ತನ್ನ ೧೮ನೆಯ ವಯಸ್ಸಿನಲ್ಲೆ ಈಕೆಗೆ ಪತಿವಿಯೋಗವಾಯ್ತು. ಗಂಗಾಧರರಾಯ ಮಾಡಿಕೊಂಡಿದ್ದ ದತ್ತಕವನ್ನು ಕಂಪನಿ ಸರಕಾರ ಪುರಸ್ಕರಿಸಲಿಲ್ಲ. ಬ್ರಿಟಿಷರ ಅನ್ಯಾಯದಿಂದ ಸಂತಪ್ತಳಾದ ಲಕ್ಷ್ಮೀಬಾಯಿ–"ನನ್ನ ಝಾಂಸಿ ಬಿಟ್ಟುಕೊಡಲಾರೆ" ಎಂದು ಗದ್ಗದಕಂಠದಿಂದ ಗರ್ಜಿಸಿದಳು. ಝಾಂಸಿಯನ್ನು ಕಂಪನಿ ಸರಕಾರಕ್ಕೆ ಸೇರ್ಪಡಿಸಿಕೊಂಡ ಮೇಲೆ ಲಕ್ಷ್ಮೀಬಾಯಿಗೆ ತಿಂಗಳಿಗೆ ೫ ಸಾವಿರ ರೂಪಾಯಿಗಳ ವಿಶ್ರಾಂತಿವೇತನವನ್ನು ಕೊಡುವುದಾಗಿ ಕಂಪನಿ ಸರಕಾರ ಗೊತ್ತುಪಡಿಸಿತು. ಆದರೆ ಲಕ್ಷ್ಮೀಬಾಯಿ ಅದನ್ನು ತಿರಸ್ಕರಿಸಿದಳು. ಇಂಗ್ಲೆಂಡಿನ ಡೈರೆಕ್ಟರರ ಮಂಡಳಕ್ಕೆ ಆಕೆ ಮಾಡಿಕೊಂಡ ಅಪೀಲು ವ್ಯರ್ಥವಾಯ್ತು. ಉಪಾಯಗಾಣದೆ ಕಂಪನಿಯವರು ಕೊಡಮಾಡಿದ್ದ ವಿಶ್ರಾಂತಿವೇತನವನ್ನು ಆಕೆ ಸ್ವೀಕರಿಸಬೇಕಾಯ್ತು. ಆ ಹಣವನ್ನು ಕೊಡುವಾಗ ಕಂಪನಿ ಸರಕಾರ ಗಂಗಾಧರರಾಯನ ಹಳೆಯ ಸಾಲದ ಬಾಕಿಯನ್ನು ಮುರಿದು ಉಳಿದ ಹಣವನ್ನು ಆಕೆಗೆ ಕೊಟ್ಟಿತು.

ಗಂಗಾಧರರಾಯ ನಿಧನ ಹೊಂದಿದಾಗ ಆತನ ಬೊಕ್ಕಸದಲ್ಲಿದ್ದ ಆರು ಲಕ್ಷ ರೂಪಾಯಿಗಳನ್ನು ಅಲ್ಪವಯಿ ದತ್ತಕಮಗ ದಾಮೋದರನ ಪರವಾಗಿ ಕಂಪನಿ ಅಮಾನತು ಖಾತೆಗೆ ಜಮಾಮಾಡಿಕೊಂಡಿತು. ದಾಮೋದರನ ಉಪನಯನಕ್ಕೆಂದು ಲಕ್ಷ್ಮೀಬಾಯಿ ಆ ಹಣದಲ್ಲಿ ಒಂದು ಲಕ್ಷರೂಪಾಯಿಗಳನ್ನು ಬೇಡಿದಾಗ ಈ ಸಾಲಕ್ಕಾಗಿ ಕಂಪನಿ ನಾಲ್ಕು ಜಾಮೀನುಗಳನ್ನು ಕೇಳಿತು. ತನಗೆ ದೊರೆತ

ವಿಶ್ರಾಂತಿವೇತನದಲ್ಲಿ ಲಕ್ಷ್ಮೀಬಾಯಿಗೆ ತನ್ನ ದೊಡ್ಡ ಆಶ್ರಿತವರ್ಗದವರನ್ನೆಲ್ಲ ಪೋಷಿಸಿಕೊಂಡು ಗೌರವದಿಂದ ಬಾಳುವುದೇ ದುಸ್ತರವೆನಿಸಿತು. ಕೋಟೆಯನ್ನು ತೆರವು ಮಾಡಿ ಊರೊಳಗಿನ ಒಂದು ಸಾಮಾನ್ಯ ಮನೆಯಲ್ಲಿ ಆಕೆ ವಾಸಿಸ ಬೇಕಾಯ್ತು. ಕಂಪನಿ ಸರಕಾರ ಝಾಂಸಿ ಸೈನ್ಯವನ್ನೆಲ್ಲ ವಿಸರ್ಜಿಸಿ ಕೋಟೆ ಯನ್ನು ತಮ್ಮ ಸೈನ್ಯದ ವಶಕ್ಕೆ ಕೊಟ್ಟಿತು.

ಇಷ್ಟೆಲ್ಲ ಅವಮಾನವನ್ನು ಈ ಸ್ವಾಭಿಮಾನಿ ಮರಾಠರ ರಾಣಿ ಸಹಿಸಿ ಯಾಳೆ? ಬ್ರಿಟಿಷರ ಬಗ್ಗೆ ಆಕೆಯ ಮನಸ್ಸು ದ್ವೇಷದಿಂದ ಕುದಿಯತೊಡಗಿತು! ಪ್ರಸಂಗವೊದಗಿದಾಗ ಅವಳು ಅವರ ಮೇಲೆ ಸೇಡುತೀರಿಸಿಕೊಳ್ಳುವ ಹವಣಿಕೆ ಯಲ್ಲಿದ್ದಳು.

ಲಕ್ಷ್ಮೀಬಾಯಿ ಸಾಮಾನ್ಯ ಸ್ತ್ರೀಯಾಗಿರಲಿಲ್ಲ. ಆಕೆಯ ವ್ಯಕ್ತಿತ್ವವನ್ನು ಅನೇಕರು ಬಣ್ಣಿಸಿದ್ದಾರೆ. ಅವಳ ಮುಖದಲ್ಲಿ ರಾಜತೇಜ ಉಕ್ಕುತ್ತಿತ್ತು. ಅವಳ ಬುದ್ಧಿ-ಹೃದಯಗಳಲ್ಲಿ ವಿಲಕ್ಷಣ ಪೌರುಷ ಚೈತನ್ಯ ತುಂಬಿ ತುಳುಕುತ್ತಿತ್ತು. ಆಕೆಯ ಧೈರ್ಯ-ಸ್ಥೈರ್ಯಗಳು ವರ್ಣನೆಗೆ ಮೀರಿದುವಾಗಿದ್ದವು. ಇಂತಹ ತೇಜಸ್ವೀ ವ್ಯಕ್ತಿತ್ವವನ್ನು ಆಕೆ ಹುಟ್ಟಿನಿಂದಲೇ ಪಡೆದುಬಂದಿದ್ದಳು. ಅಲ್ಲದೆ ಚಿಕ್ಕಂದಿನಿಂದಲೇ ಅಂತಹ ವ್ಯಕ್ತಿತ್ವದ ಬೆಳೆವಣಿಗೆಗೆ ತಕ್ಕ ವಾತಾವರಣ ಮತ್ತು ಶಿಕ್ಷಣಗಳ ಅವಕಾಶವೂ ಆಕೆಗೆ ತಾನಾಗಿಯೇ ಲಭ್ಯವಾಗಿತ್ತು. ಹಸುಳೆಯಿದ್ದಾ ಗಲೇ ತಾಯಿಯನ್ನು ಕಳೆದುಕೊಂಡು ತಬ್ಬಲಿಯಾಗಿದ್ದ ಈಕೆ ತಂದೆಯ ವಾತ್ಸಲ್ಯಪೂರಿತ ಪೋಷಣೆಯಲ್ಲೇ ದೊಡ್ಡವಳಾಗಿದ್ದಳು. ತಂದೆ ಮೋರೋ ಪಂತ ತಾಂಬೆ ಬ್ರಹ್ಮಾವರ್ತದಲ್ಲಿ ಪೇಶ್ವೆ ೨ನೆಯ ಬಾಜೀರಾಯನ ಸೇವೆಯಲ್ಲಿ ನುರಿತ ಅಧಿಕಾರಿಯಾಗಿದ್ದ. ಆಗ ಅಲ್ಲಿ ೨ನೆಯ ಬಾಜೀರಾಯನ ದತ್ತಪುತ್ರ ನಾನಾಸಾಹೇಬ್ ಮತ್ತು ಆತನ ಬಾಲ್ಯ ಸ್ನೇಹಿತ ತಾತ್ಯಾಟೋಪಿ ಇವರೂ ಇದ್ದರು.

ಲಕ್ಷ್ಮೀಬಾಯಿಯ ಚಿಕ್ಕಂದಿನ ಹೆಸರು ಮಣಿಕರ್ಣಿಕಾ ಎಂದಿತ್ತು. ಎಲ್ಲರೂ ಮನೂಬಾಯಿಯೆಂದು ಸಲುಗೆಯಿಂದ ಕರೆಯುತ್ತಿದ್ದರು. ನಾನಾ,

ತಾತ್ಯಾ ಮತ್ತು ಮನೂ-ಈ ಮೂವರಿಗೂ ಬ್ರಹ್ಮಾವರ್ತದಲ್ಲಿ ೨ನೆಯ ಬಾಜೀರಾಯನ ಮತ್ತು ಮೋರೋಪಂತನ ಮಾರ್ಗದರ್ಶನದಲ್ಲಿ ಯುದ್ಧಕಲೆಯ ತರಬೇತಿ ಪಡೆಯುವ ಸದವಕಾಶ ದೊರೆಯಿತು. ಚುರುಕು ಬುದ್ಧಿಯ, ಸ್ವತಂತ್ರ ಪ್ರವೃತ್ತಿಯ ಮನೂಬಾಯಿಗೆ ಬಾಲ್ಯದಿಂದಲೆ ಪುರುಷವೇಷ ಧರಿಸುವಲ್ಲಿ ತುಂಬ ಪ್ರೀತಿಯಿತ್ತು. ವ್ಯಾಯಾಮಸಾಧನೆ, ಕುದುರೆಸವಾರಿ, ಕತ್ತಿವರಸೆ ಇತ್ಯಾದಿ ರಾಜಕುಮಾರರ ಆಟಪಾಟಗಳಲ್ಲೇ ಈಕೆಗೆ ಬಹು ಆಸಕ್ತಿ. ಝಾಂಸಿ ರಾಣಿಯಾಗುವ ಮತ್ತು ಸ್ವಾತಂತ್ರ್ಯಯೋಧಳಾಗುವ ಭವಿಷ್ಯದ ಅರಿವು ಆಗ ಅವಳಿಗಿತ್ತೆ? ಯಾರ ಕನಸು-ಮನಸ್ಸಿನಲ್ಲಿಲ್ಲದ ಅಮರ ಕೀರ್ತಿಯ ಮಹೋಜ್ವಲ ಭವಿಷ್ಯಕ್ಕಾಗಿ ತಕ್ಕ ಸಿದ್ಧತೆಯನ್ನು ಮನೂಬಾಯಿ ನಡೆಸಿದ್ದಳು! ಅದಕ್ಕೆ ಆವಶ್ಯಕವಾದ ವಾತಾವರಣವು ರಾಜಮನೆತನದ ಸಾನ್ನಿಧ್ಯದಲ್ಲಿ ಈ ಬಾಲಿಕೆಗೆ ದೊರೆತುದು ಒಂದು ಯೋಗಾಯೋಗವೇ ಅಲ್ಲವೆ?

ಲಕ್ಷ್ಮೀಬಾಯಿ ಒಳ್ಳೆಯ ಗೌರವಪೂರ್ಣ ವ್ಯಕ್ತಿಯಾಗಿದ್ದಳು. ಅವಳ ಸ್ವಭಾವವು ರಾಣಿಗೆ ತಕ್ಕಂತೆ ಉದಾರವೂ ಕರುಣಾಪೂರ್ಣವೂ ಆಗಿತ್ತು. ತನ್ನ ಪರಿಶುದ್ಧ ಚಾರಿತ್ರ್ಯದಿಂದ, ಕೋಮಲ ಅಂತಃಕರಣದಿಂದ ಪ್ರಜಾಕೋಟಿಯ ಗೌರವಕ್ಕೂ ಭಕ್ತಿಗೂ ಆಕೆ ಪಾತ್ರಳಾಗಿದ್ದಳು.

೧೮೫೭ರ ಕ್ರಾಂತಿ ಆರಂಭವಾದ ಕೂಡಲೆ ಝಾಂಸಿ ಕೋಟೆಯಲ್ಲಿ ವಾಸಿಸುತ್ತಿದ್ದ ಆಂಗ್ಲರೆಲ್ಲರೂ ತತ್ತರಿಸಿಹೋದರು. ಮಿಂಚಿನ ದಾಳಿಗಳಿಂದ ಹಿಂದೀಯ ಸೈನಿಕರು ಬಿಳಿಯರ ಕಗ್ಗೊಲೆಗೆ ತೊಡಗಿದರು. ಎಲ್ಲೆಲ್ಲೂ ಹಾಹಾಕಾರ! ಬ್ರಿಟಿಷ್ ಅಧಿಕಾರಿ ವರ್ಗದವರೂ ಇತರರೂ ಝಾಂಸಿರಾಣಿಯ ಹತ್ತಿರ ಬಂದು ರಾಜ್ಯದ ಆಡಳಿತ ಸೂತ್ರಗಳನ್ನು ವಹಿಸಿ ರಕ್ತಕ್ರಾಂತಿಯನ್ನು ತಡೆಯಬೇಕೆಂದು ಬೇಡಿಕೊಂಡರು. ಇತ್ತ ಕ್ರಾಂತಿಯೋಧರೂ ಆಕೆಗೆ ಸ್ವಾತಂತ್ರ್ಯ ಸಮರದ ನಾಯಿಕೆಯಾಗಿ ಮಾರ್ಗದರ್ಶನ ಮಾಡಬೇಕೆಂದೂ ಒತ್ತಾಯಿಸತೊಡಗಿದರು.

ಝಾಂಸಿ ರಾಣಿ ಈ ವರೆಗೆ ಕಾಯುತ್ತಿದ್ದ ವಿಪ್ಲವದ ಸುಸಂಧಿ ತಾನಾಗಿಯೇ ಒದಗಿ ಬಂದಿತ್ತು. ಝಾಂಸಿಲಕ್ಷ್ಮೀಬಾಯಿಯಲ್ಲಿ ವೀರಾವೇಶ ತುಂಬಿ ಬಂತು!

ಸಿಂಹಿಣಿಯಂತೆ ಸಿಡಿದೆದ್ದಳು! ತನ್ನಲ್ಲಿದ್ದ ಸೈನಿಕರನ್ನೆಲ್ಲ ಒಟ್ಟುಗೂಡಿಸಿ ಬ್ರಿಟಿಷರ ಸುಸಜ್ಜಿತ ಸೈನ್ಯವನ್ನೆದುರಿಸಿದಳು. ಸೇನಾಧಿಪತ್ಯದ ವೇಷಧರಿಸಿ, ಖಡ್ಗಧಾರಿಯಾಗಿ ರಾಜಕುದುರೆಯನ್ನೇರಿ ಕ್ರಾಂತಿವೀರರನ್ನು ಹುರಿದುಂಬಿಸುತ್ತ ಮಿಂಚಿನ ವೇಗದಿಂದ ತುಮುಲ ಯುದ್ಧದಲ್ಲಿ ಧುಮುಕಿದಳು ಝಾಂಸಿ ರಾಣಿ! ಕೊನೆಯಲ್ಲಿ ಸ್ವಾತಂತ್ರ್ಯದೇವಿಗೆ ಆತ್ಮ ಬಲಿದಾನವಿತ್ತು ವೀರಮರಣ ಹೊಂದಿದಳು! ಝಾಂಸಿ ಲಕ್ಷ್ಮೀಬಾಯಿಯ ಸ್ವಾತಂತ್ರ್ಯಪ್ರೇಮ, ತ್ಯಾಗ, ಸಾಹಸ, ಪರಾಕ್ರಮಗಳು ಕಾಲದ ಮಿತಿಯಿಲ್ಲದೆ ಭಾರತೀಯರಿಗೆ ಸ್ಫೂರ್ತಿದಾಯಕವಾಗಿಲ್ಲವೆ?

# ನಾನಾಸಾಹೇಬ

ಪೇಶ್ವೆ ೨ನೆಯ ಬಾಜಿರಾಯ ತೀರಿಕೊಂಡಮೇಲೆ ಕಂಪನಿ ಸರಕಾರ ಅವನಿಗೆ ಕೊಡುತ್ತಿದ್ದ ಎಂಟು ಲಕ್ಷ ರೂಪಾಯಿಗಳ ವಿಶ್ರಾಂತಿವೇತನವನ್ನು ಆತನ ದತ್ತಪುತ್ರ ನಾನಾಸಾಹೇಬನಿಗೆ ಕೊಡಲು ಡಾಲ್‌ಹೌಸಿ ನಿರಾಕರಿಸಿದ. ರಾಜಕುಮಾರನಂತೆ ಬದುಕು ನಡೆಸಿದ್ದ ನಾನಾಸಾಹೇಬ ಸಾಮಾನ್ಯ ಮನುಷ್ಯನ ಸ್ಥಿತಿಗಿಳಿದ. ಬ್ರಿಟಿಷರು ಮಾಡಿದ ಅನ್ಯಾಯ, ಅವಮಾನಗಳಿಂದ ನಾನಾಸಾಹೇಬ ಬ್ರಿಟಿಷರ ಕಡುವೈರಿಯಾಗಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದ.

"ನನಗೆ ಆಂಗ್ಲರ ಮೋಸದಾಟವೆಲ್ಲ ಗೊತ್ತಿದೆ. ಜೀವ ಒಂದು ದಿನ ಹೋಗಲೇಬೇಕು. ಅವಮಾನವನ್ನು ಸಹಿಸಲಾರೆ. ನಾನಿರುವವರೆಗೆ ನಮ್ಮ ನಿಮ್ಮ ನಡುವೆ ಯುದ್ಧ ನಡೆಯಲಿ. ಏನೇ ವ್ಯವಹಾರ ನಡೆದರೂ ಖಡ್ಗ ದಿಂದಲೇ ನಡೆಯಲಿ!" ಎಂದು ಕಂಪನಿ ಸರಕಾರಕ್ಕೆ ದಿಟ್ಟತನದಿಂದ ತಿಳಿಸಿದ ಕಡುಗಲಿಯೀತ. ನೇಪಾಳದ ಅಡವಿಯಲ್ಲಿ ಅಡಗಿದ್ದ ನಾನಾಸಾಹೇಬ ರಾಣಾ ಜಂಗ್ ಬಹದ್ದೂರನಿಗೆ ಹೀಗೆ ಬರೆದು ತಿಳಿಸಿದ :–"ಬ್ರಿಟಿಷರಿಂದ ಭಾರತಕ್ಕಾಗುವ ಅನ್ಯಾಯಗಳನ್ನು ವಿವರಿಸಿ ಹೇಳುವದರಿಂದೇನು ಪ್ರಯೋಜನ? 'ಸ್ವರಾಜ್ಯ' ಹೋಯ್ತು. ಭಾರತದ ಸರ್ವನಾಶವಾಯ್ತು. ಧರ್ಮ ನಿರ್ಮೂಲವಾಯ್ತು. ಸ್ವಧರ್ಮಕ್ಕಾಗಿ, ಸ್ವರಾಜ್ಯಕ್ಕಾಗಿ ನಾವೀಸಂಗ್ರಾಮವ ನ್ನಾರಂಭಿಸಿದ್ದೇವೆ." ನಾನಾಸಾಹೇಬ ತಲೆಮರೆಸಿಕೊಂಡಿದ್ದು ಕೊನೆಯ ವರೆಗೂ ಬ್ರಿಟಿಷರಿಗೆ ಶರಣು ಬರಲಿಲ್ಲ. ಆತನನ್ನು ಹಿಡಿದುಕೊಟ್ಟವರಿಗೆ ೧ ಲಕ್ಷ ರೂಪಾಯಿಗಳ ಬಹುಮಾನವನ್ನು ಇಡಲಾಗಿತ್ತು.

# ತಾತ್ಯಾ ಟೋಪಿ

ತಾತ್ಯಾಟೋಪಿ ೨ನೆಯ ಬಾಜಿರಾಯನ ಸೈನ್ಯದಲ್ಲಿ ಸರದಾರನಾಗಿದ್ದ. ನಾನಾಸಾಹೇಬನ ನಚ್ಚಿನ ಮಿತ್ರನೀತ. ಈತನ ಬಳಿ ಸುಸಜ್ಜಿತ ಸೇನೆಯಿತ್ತು. ಈ ಸೇನೆಯ ಸಹಾಯದಿಂದ ಆಂಗ್ಲ ಸೈನ್ಯವನ್ನೆದುರಿಸಿ ಅನೇಕ ಕಡೆಗಳಲ್ಲಿ ಅವರಿಗೆ ಸಾವು-ನೋವುಗಳನ್ನುಂಟುಮಾಡಿದ. ಯುದ್ಧದಲ್ಲಿ ಇವನ ಸಮಾನರಾರೂ ಇಲ್ಲವೆಂದು ಆಂಗ್ಲರೇ ಹೊಗಳಿದ್ದಾರೆ. ಇವನ ಸಾಹಸ ಕೃತ್ಯಗಳು ಆಂಗ್ಲರನ್ನು ನಿಜವಾಗಿಯೂ ದಂಗುಬಡಿಸಿದವು. ಈತನನ್ನು ಯುದ್ಧದಲ್ಲಿ ಎದುರಿಸುವುದಕ್ಕಾಗದೆ ಆಂಗ್ಲರು ಭೇದೋಪಾಯಕ್ಕೆ ಕೈಯಿಕ್ಕಿದರು. ದೇಶದ್ರೋಹಿ ಮಾನಸಿಂಗ ಆಂಗ್ಲರ ಆಮಿಷಕ್ಕೊಳಗಾಗಿ ತಾತ್ಯಾನನ್ನು ಹಿಡಿದು ಕೊಡಲೊಪ್ಪಿದ. ಮಾನಸಿಂಗ ತಾತ್ಯಾನನ್ನು ಸೇರಿಕೊಂಡು, ನಂಬುಗೆ ಹುಟ್ಟಿಸಿ ಅವನು ಮಲಗಿದ್ದಾಗ ಆಂಗ್ಲರು ಅವನನ್ನು ಹಿಡಿದೊಯ್ಯುವಂತೆ ಅವಕಾಶ ಮಾಡಿಕೊಟ್ಟ. ದೇಶಪ್ರೇಮಿಯಾದ ತಾತ್ಯಾನನ್ನು ರಾಜದ್ರೋಹಿಯೆಂದು ಹೆಸರಿಟ್ಟು, ಗಲ್ಲಿಗೇರಿಸಿದರು. ತಾತ್ಯಾಟೋಪಿಯ ಈ ವೀರಚರಿತೆ ಸಂಗೊಳ್ಳಿ ರಾಯಣ್ಣನನ್ನು ನೆನಪಿಗೆ ತರುವದಲ್ಲವೆ?

ಈ ವೀರರಲ್ಲದೆ, ಜಹಗೀರನ್ನು ಕಳೆದುಕೊಂಡ ಜಗದೀಶಪುರದ ಕುವರ ಸಿಂಹ, ತನ್ನ ಆನುವಂಶಿಕ ಅರಮನೆಯಿಂದ ಹೊರದೂಡಲ್ಪಟ್ಟ ಮೊಗಲ್ ಸಾಮ್ರಾಟ್ ಬಹದೂರ್‌ಷಾ ಮುಂತಾದವರು ಈ ಸ್ವಾತಂತ್ರ್ಯಸಮರದ ನಾಯಕತ್ವ ವಹಿಸಿದರು. ಇವರನ್ನು ಬಾಧಿಸುತ್ತಿದ್ದ ಕಾರಣಗಳು ಬೇರೆ ಬೇರೆ ಇದ್ದರೂ ಅವರೆಲ್ಲರ ಶತ್ರು ಮಾತ್ರ ಒಬ್ಬರೇ. ಅವರೇ ಬ್ರಿಟಿಷರು.

## ಮತ್ತೆ ಕರ್ನಾಟಕದಲ್ಲಿ

ಉತ್ತರ ಹಿಂದುಸ್ತಾನದಲ್ಲಿ ಕ್ರಾಂತಿಯ ಜ್ವಾಲೆಗಳು ಹರಡುತ್ತಿದ್ದಾಗ ದಕ್ಷಿಣ ಹಿಂದುಸ್ತಾನಕ್ಕೂ-ವಿಶೇಷವಾಗಿ ಕರ್ನಾಟಕಕ್ಕೂ ಆ ಜ್ವಾಲೆಗಳ ನಾಲಗೆಗಳು ತಗಲದೆ ಇರಲಿಲ್ಲ. ಬ್ರಿಟಿಷರ ದಬ್ಬಾಳಿಕೆಯಿಂದ ಉಂಟಾಗುತ್ತಿದ್ದ ಅಶಾಂತಿಯ ಮಟ್ಟಿಗೆ ಉತ್ತರ ಮತ್ತು ದಕ್ಷಿಣ ಭಾರತಗಳಲ್ಲಿ ವಿಶೇಷ ಅಂತರವಿರಲಿಲ್ಲವೆಂದೇ ಹೇಳಬಹುದು. ಕರ್ನಾಟಕದ ನಾನಾಭಾಗಗಳಲ್ಲಿ ೧೮೫೭-೫೮ರಲ್ಲಿ ಜರಗಿದ ಕ್ರಾಂತಿಗಳಲ್ಲಿ ಇಬ್ಬರು ಸ್ವಾತಂತ್ರ್ಯವೀರರು ಚಿರಸ್ಮರಣೀಯರಾಗಿದ್ದಾರೆ: ಒಬ್ಬನು ಸುರಪುರದ ವೆಂಕಟಪ್ಪನಾಯಕ; ಇನ್ನೊಬ್ಬ ನರಗುಂದದ ಬಾಬಾಸಾಹೇಬ.

### ಸುರಪುರದ ವೆಂಕಟಪ್ಪನಾಯಕ

೧೮೫೭-೫೮ರಲ್ಲಿ ಬೆಳಕಿಗೆ ಬಂದ ಕರ್ನಾಟಕದ ಸ್ವಾತಂತ್ರ್ಯವೀರರಲ್ಲಿ ಸುರಪುರದ ವೆಂಕಟಪ್ಪನಾಯಕನ ಹೆಸರು ಪ್ರಮುಖವಾಗಿದೆ. ಸ್ವಾತಂತ್ರ್ಯ ಯುದ್ಧದಲ್ಲಿ ನಾಯಕತ್ವ ವಹಿಸುವ ಯೋಗ್ಯತೆ ಈ ೨೮ ವರುಷದ ತರುಣ ವೀರನಲ್ಲಿತ್ತೆಂಬುದರಲ್ಲಿ ಸಂದೇಹವಿಲ್ಲ.

ನರಗುಂದ, ಮುಂಡರಗಿ, ಆನೆಗೊಂದಿ ಮುಂತಾದ ಚಿಕ್ಕಪುಟ್ಟ ಸಂಸ್ಥಾನಗಳಲ್ಲಿಯ ಸಂಸ್ಥಾನಿಕರು ಬ್ರಿಟಿಷರ ವಿರುದ್ಧವಾಗಿ ದಂಗೆಯೇಳಲು ಸಿದ್ಧರಿದ್ದರೂ ಅವರಲ್ಲಿ ಯಾರಲ್ಲಿಯೂ ಸೈನಿಕಶಕ್ತಿ ಇರಲಿಲ್ಲ. ಆದರೆ ವೆಂಕಟಪ್ಪನಾಯಕನ ಹತ್ತಿರವಿದ್ದ ೧೨,೦೦೦ ಬೇಡರ ಪಡೆಯ ಸಹಾಯ ದೊರೆತರೆ ಕ್ರಾಂತಿ ಯಶಸ್ವಿಯಾಗುವುದೆಂದು ನಂಬಿದ್ದ ಎಲ್ಲ ಕ್ರಾಂತಿಕಾರರೂ ಸುರಪುರದ ನಾಯಕನು ಚಿಕ್ಕವನಿದ್ದರೂ ಆತನ ನೇತೃತ್ವದಲ್ಲಿ ಹೋರಾಡಲು ಸಿದ್ಧರಿದ್ದರು.

ಮತ್ತು ವೆಂಕಟಪ್ಪನಾಯಕನ ಸ್ವಾತಂತ್ರ್ಯಪ್ರೇಮವು ಎಲ್ಲರಿಗೂ ಗೊತ್ತಿದ್ದ ವಿಷಯವಾಗಿತ್ತು. ಕ್ರಾಂತಿವೀರ ನಾನಾಸಾಹೇಬನಿಗೂ ಸುರಪುರದ ವೆಂಕಟಪ್ಪ ನಾಯಕನಿಗೂ ಗುಪ್ತಚಾರರ ಮುಖಾಂತರ ಸಂದೇಶಗಳ ವಿನಿಮಯ ನಡೆದಿತ್ತು. ಇದು ಬ್ರಿಟಿಷರಿಗೂ ಗೊತ್ತಿತ್ತು.

ಶೂರರಾದ ಬೇಡರ ಪುರವೇ ಶೂರಪುರ ಅಥವಾ ಸುರಪುರ. ಆಗ ಈ ನಾಡು ಹೈದರಾಬಾದದ ನಿಜಾಮನ ಅಂಕಿತಕ್ಕೆ ಒಳಪಟ್ಟಿತ್ತು. ಸುರಪುರದ ಅರಸರು ನಿಜಾಮನಿಗೆ ಪ್ರತಿವರುಷ ೫೦,೦೦೦ ರೂಪಾಯಿಗಳ ಕಪ್ಪ ಕೊಡುವ ಕರಾರಿತ್ತು. ಸುರಪುರದ ಆರ್ಥಿಕಸ್ಥಿತಿ ಬಹಳ ಕೆಟ್ಟಿದ್ದರಿಂದ ವೆಂಕಟಪ್ಪನಾಯಕನಿಗೆ ಈ ಕಪ್ಪ ತೆರುವುದು ಬಹು ದುಸ್ತರವೇ ಆಗಿತ್ತು. ನಿಜಾಮನ ಬೆನ್ನುಕಟ್ಟಿ ಬ್ರಿಟಿಷರು ಕಪ್ಪಕಾಣಿಕೆಗಳಿಗಾಗಿ ಸುರಪುರದ ಸುಲಿಗೆಯನ್ನೇ ನಡೆಸಿದರು. ಸುರಪುರದ ಬೊಕ್ಕಸವೆಲ್ಲ ಬರಿದಾಗಿತ್ತು. ಪಟ್ಟಕ್ಕೆ ಬಂದಾಗ ವೆಂಕಟಪ್ಪ ಅಲ್ಪವಯಿಯಾಗಿದ್ದ. ಆತನ ಚಿಕ್ಕಪ್ಪ ಪೆದ್ದನಾಯಕನಿಗೆ ಆಡಳಿತದಲ್ಲಿ ಅವಕಾಶ ಕಲ್ಪಿಸಿ ಭೇದೋಪಾಯದ ರಾಜಕೀಯ ನಡೆಸುವ ಕುತಂತ್ರ ಬ್ರಿಟಿಷರದಾಗಿತ್ತು. ಆದರೆ ಮೆಡೋಜ್ ಟೇಲರ್ ಎಂಬ ಆಂಗ್ಲ ಸಲಹೆಗಾರನು ವೆಂಕಟಪ್ಪನಾಯಕನ ಪಾಲಕತ್ವ ವಹಿಸಿ ಪೆದ್ದನಾಯಕ ಆಡಳಿತದಲ್ಲಿ ಕೈಹಾಕದಂತೆ ಮಾಡಿದ. ಟೇಲರ್ ವೆಂಕಟಪ್ಪನ ನಿಜವಾದ ಹಿತಚಿಂತಕನಾಗಿದ್ದನಲ್ಲದೆ ಆತನನ್ನು ಪುತ್ರವಾತ್ಸಲ್ಯದಿಂದ ನೋಡಿಕೊಂಡಿದ್ದ. ವೆಂಕಟಪ್ಪನಾಯಕ ವಯಸ್ಸಿಗೆ ಬಂದಮೇಲೆ ಟೇಲರ್ ಆತನ ರಾಜ್ಯವನ್ನು ಆತನ ಕೈಗೊಪ್ಪಿಸಿ ಸ್ಥಳಾಂತರ ಹೊಂದಬೇಕಾಯ್ತು. ಆಗ ವರ್ಷಕ್ಕೆ ೨೦,೦೦೦ ರೂಪಾಯಿಗಳ ವೆಚ್ಚದಲ್ಲಿ ಒಬ್ಬ ಬ್ರಿಟಿಷ್ ರಾಜಕೀಯ ಸಲಹೆಗಾರನನ್ನು ಇರಿಸಿಗೊಳ್ಳಬೇಕೆಂದು ಡಾಲ್‌ಹೌಸಿ ಅಪ್ಪಣೆ ವಿಧಿಸಿದ. ಆರ್ಥಿಕ ತೊಂದರೆಗಳಿದ್ದ ಕಾರಣ ಈ ನೇಮಕವನ್ನು ಸ್ಪಷ್ಟವಾಗಿ ನಾಯಕ ನಿರಾಕರಿಸಿದ.

ಉತ್ತರ ಹಿಂದುಸ್ಥಾನದ ದಂಗೆಯ ವಾರ್ತೆಗಳು ನಾಯಕನ ಕಿವಿಗೂ ಮುಟ್ಟಿದಾಗ ಸಂಸ್ಥಾನವನ್ನು ಇಷ್ಟೊಂದು ಹೀನಾವಸ್ಥೆಗೆ ತಂದ ಬ್ರಿಟಿಷರ

ವಿರುದ್ಧ ಕ್ರಾಂತಿ ಹೂಡುವುದರಲ್ಲಿ ಆತ ತೊಡಗಿದ. ವೆಂಕಟಪ್ಪನಾಯಕನ ಗುಪ್ತಚಾರ ಮಹಿಪಾಲಸಿಂಗನನ್ನು ಬ್ರಿಟಿಷರು ತೋಫಿನ ಬಾಯ್ಗೆ ಕೊಟ್ಟು ಕೊಂದರು. ನಾಯಕ ತನ್ನ ಸೈನ್ಯಪಡೆಯನ್ನು ಹೆಚ್ಚಿಸುವಲ್ಲಿ ತೊಡಗಿದ್ದು ತಿಳಿದು, ಬ್ರಿಟಿಷರು ಸುರಪುರದ ಮೇಲೆ ದಾಳಿ ಮಾಡುವ ಹಂಚಿಕೆಯಲ್ಲೂ ಇದ್ದರು. ಕೊನೆಗೆ ಸುರಪುರದ ಹೊರಬಯಲಿನಲ್ಲಿ ಬ್ರಿಟಿಷರು ಬೀಡು ಬಿಟ್ಟಾಗ ವೆಂಕಟಪ್ಪನಿಗೆ ಬ್ರಿಟಿಷರ ಕುಟಿಲಕಾರಸ್ಥಾನದ ಬಿಸಿ ತಗುಲಿತು. ಬೇಗನೆ ಕ್ರಾಂತಿ ಹೂಡಬೇಕೆಂದೇ ಆತ ನಿಶ್ಚಯಿಸಿದ. ನೆರೆಹೊರೆಯ ಸಂಸ್ಥಾನಿಕರು, ಜಮೀನುದಾರರು, ವೆಂಕಟಪ್ಪನಾಯಕ ಸ್ವಾತಂತ್ರ್ಯ ಸಮರ ಹೂಡಿದಲ್ಲಿ ತಾವು ನೆರವಿಗೆ ಬರುವುದಾಗಿ ಆತನಿಗೆ ಗುಪ್ತವಾಗಿ ಸೂಚಿಸಿದರು. ಉತ್ತರ ಹಿಂದುಸ್ಥಾನದಲ್ಲಿ ಬ್ರಿಟಿಷರು ಹಿಮ್ಮೆಟ್ಟುತ್ತಿರುವರೆಂದೂ ಇದೇ ಸಮಯದಲ್ಲಿ ದಕ್ಷಿಣದ ಈ ಭಾಗದಿಂದ ಅವರನ್ನು ಓಡಿಸಿಬಿಟ್ಟರೆ ವೆಂಕಟಪ್ಪ ನಾಯಕ ಇಡಿಯ ದಕ್ಷಿಣ ಹಿಂದುಸ್ಥಾನಕ್ಕೇ ಅಧಿಪತಿಯಾಗುವುದಾಗಿ ಬ್ರಾಹ್ಮಣರೇ ಮೊದಲಾದವರು ಆತನನ್ನು ಹರಸತೊಡಗಿದರು. ಸುರಪುರದ ಹೊರವಲಯದ ಆಂಗ್ಲ ಸೈನ್ಯದ ಮೇಲೆ ವೆಂಕಟಪ್ಪನಾಯಕನ ಸೈನಿಕದಾಳಿ ರಾತ್ರಿಯಲ್ಲೇ ನಡೆಯಿತು. ಆಂಗ್ಲರಿಗೆ ಸಾವು-ನೋವುಗಳೊದಗಿದವು. ಆದರೆ ಸ್ವಲ್ಪೇ ಸಮಯದಲ್ಲಿ ಆಂಗ್ಲರ ಹೆಚ್ಚಿನ ಸೈನ್ಯ ಬಂದು ಸುರಪುರ ಸೈನ್ಯ ಹಿಮ್ಮೆಟ್ಟಿ ಊರೊಳಗೆ ಸರಿಯಿತು. ಮುಂದೆ ಆಂಗ್ಲರು ಊರಲ್ಲಿ ಹೊಕ್ಕರು. ವೆಂಕಟಪ್ಪನಾಯಕ ಅರಮನೆ ಬಿಟ್ಟು ಓಡಿಹೋದ. ಅಂತಃಪುರದ ಸ್ತ್ರೀಯರೂ ಪಾರಾಗಿ ಹತ್ತಿರದ ಹಳ್ಳಿಯನ್ನು ಸೇರಿದರು. ಆಂಗ್ಲ ಸೈನ್ಯ ಅರಮನೆ ಹೊಕ್ಕಿತು. ವೆಂಕಟಪ್ಪನಾಯಕ ಹೈದರಾಬಾದಿನಲ್ಲಿ ಸೆರೆಸಿಕ್ಕ. ಆತನಿಗೆ ಮರಣದಂಡನೆ ವಿಧಿಸಲಾಯ್ತು. ಆಂಗ್ಲರ ಆಜ್ಞೆಯಂತೆ ದಾಸ್ಯದಲ್ಲಿ ಕೊಳೆಯಲು ನಿರಾಕರಿಸಿದ್ದೇ ಆತ ಮಾಡಿದ ಅಪರಾಧ!

ತನ್ನ ಮಗನಂತೆ ಕಾಪಾಡಿದ್ದ ಟೇಲರ್ ಸುದ್ದಿ ತಿಳಿದು ವೆಂಕಟಪ್ಪನಾಯಕನನ್ನು ಕಾಣಲು ಧಾವಿಸಿದ. ಅವನಿಗಾದ ಮರಣ ದಂಡನೆಯನ್ನು ತಪ್ಪಿಸುವುದಕ್ಕಾಗಿ ಟೇಲರ್ ಯತ್ನಿಸಿದ. ಕ್ರಾಂತಿಯ ಒಳಸಂಚಿನ ವಿವರಗಳನ್ನು, ಸಂಬಂಧ

ಪಟ್ಟ ಸ್ವಾತಂತ್ರ್ಯಯೋಧರ ಹೆಸರುಗಳನ್ನು ವೆಂಕಟಪ್ಪನಾಯಕ ತಿಳಿಸಲು ಕೊನೆಗೂ ಒಪ್ಪಲಿಲ್ಲ: “ಈ ಕರಾರಿನ ಮೇಲೆ ನಾನು ಜೀವಯಾಚನೆ ಮಾಡಲಾರೆ. ದಂಗೆಕೋರನೆಂದು ನನ್ನನ್ನು ತೋಫಿನ ಬಾಯ್ಗೆ ಕೊಡಿ. ಕೊಲೆಪಾತಕಿಯಂತೆ ನನ್ನನ್ನು ಗಲ್ಲಿಗೆ ಮಾತ್ರ ಹಾಕಬೇಡಿ”—ಎಂದು ದಿಟ್ಟತನದಿಂದ ಉದ್ಗರಿಸಿದ ಸ್ವಾತಂತ್ರ್ಯವೀರನೀತ. ಟೇಲರನ ಪ್ರಯತ್ನದಿಂದ ಮರಣದಂಡನೆಯನ್ನು ಜೀವಾವಧಿ ಶಿಕ್ಷೆಗೆ ಇಳಿಸಲಾಯ್ತು. ಮುಂದೆ ಒಳ್ಳೆಯ ನಡತೆಯಿಂದ ವರ್ತಿಸಿದಲ್ಲಿ ನಾಲ್ಕು ವರುಷಗಳಲ್ಲಿ ಆತನನ್ನು ಮುಕ್ತಗೊಳಿಸಬಹುದೆಂದೂ ಆತನ ರಾಜ್ಯವನ್ನು ಆತನಿಗೆ ಮರಳಿ ಕೊಡುವುದಾಗಿಯೂ ತೀರ್ಮಾನವಾಯ್ತು. ಮದ್ರಾಸ್ ಬಳಿಯ ಚಿಂಗಲ್‌ಪೇಟೆಯ ಕೋಟೆಯಲ್ಲಿ ಆತನನ್ನು ಬಂಧಿಸಿಡಲು ಕರೆದೊಯ್ಯುವ ಸಂದರ್ಭದಲ್ಲಿ ಆತನನ್ನು ಯಾರೋ ಗುಂಡಿಟ್ಟು ಕೊಂದರು. ವೆಂಕಟಪ್ಪನಾಯಕ ತಾನೇ ಆತ್ಮಹತ್ಯೆಮಾಡಿಕೊಂಡ ಎಂದೂ ಕೆಲವರು ತಿಳಿಸಿದರು. ಗುಂಡಿನ ಸಪ್ಪಳ ಕೇಳಿಸಿದಾಗ ವೆಂಕಟಪ್ಪನ ಡೇರೆಗೆ ಹೋದ ಜನ ಕಂಡದ್ದು ಹೊಟ್ಟೆಯಲ್ಲಿ ಗುಂಡು ನಟ್ಟು ಪ್ರಾಣಬಿಟ್ಟಿದ್ದ ನಾಯಕನ ಶವವನ್ನು ಮಾತ್ರ. ಹೀಗೆ ಅಪ್ರತಿಮ ಸ್ವಾತಂತ್ರ್ಯ ಯೋಧನೊಬ್ಬನ ಅಂತ್ಯ ೨೪ರ ಎಳೆಯ ಪ್ರಾಯದಲ್ಲೇ ಆದುದು ತುಂಬ ಶೋಚನೀಯ. ಹಾಗೆಯೇ ಈ ಕೊನೆಯ ರಾಜನೊಂದಿಗೆ ಸುರಪುರದ ಅಂತ್ಯವೂ ಆಯ್ತು. ಬ್ರಿಟಿಷರ ಕುಟಿಲತೆಗೆ ಗೆಲುವು ಉಂಟಾಯ್ತು. ಆದರೆ ಇದು ನಿಜವಾದ ಗೆಲುವೆ?

# ನರಗುಂದದ ಬಾಬಾಸಾಹೇಬ

೧೮೫೭ರ ಸುಮಾರಿಗೆ ಬ್ರಿಟಿಷರ ರಾಜ್ಯಲಾಲಸೆಯ ನೀತಿಯಿಂದ ಉತ್ತರ ಕರ್ನಾಟಕದ ತುಂಬೆಲ್ಲ ಕ್ರಾಂತಿಯ ವಾತಾವರಣ ಹಬ್ಬಿತ್ತು. ಇಲ್ಲಿಯ ಸಂಸ್ಥಾನಿಕರು ಮತ್ತು ಜಮೀನುದಾರರು ಬ್ರಿಟಿಷರ ವಿರುದ್ಧವಾಗಿ ಕ್ರಾಂತಿಯ ಪ್ರಯತ್ನಗಳನ್ನು ಗುಪ್ತವಾಗಿ ನಡೆಸಿದ್ದರು. ಸುರಪುರದ ವೆಂಕಟಪ್ಪನಾಯಕನ ದುರಂತಕಥೆಯನ್ನು ಕೇಳಿದ ಮೇಲಂತೂ ಎಲ್ಲರೂ ತಪ್ತರಾದರು.

೧೮೧೮ರ ವರೆಗೆ ಪೇಶ್ವಾಯಿ ರಾಜ್ಯಕ್ಕೆ ಸೇರಿದ್ದ ಸಂಸ್ಥಾನಗಳು ೧೮೫೭ರ ಹೊತ್ತಿಗೆ ಅವೆಲ್ಲವೂ ಕಂಪನಿ ಸರಕಾರದ ಮಾಂಡಳಿಕ ರಾಜ್ಯಗಳಾದವು. ಈ ಸಂಸ್ಥಾನಿಕರ ಮತ್ತು ಜಮೀನುದಾರರ ಗುಪ್ತ ಚಟುವಟಿಕೆಗಳ ಬಗ್ಗೆ ಸಂದೇಹ ವುಂಟಾದಾಗ ಕಂಪನಿ ಸರಕಾರ ಇವರ ಪ್ರಭಾವವನ್ನು ಕುಗ್ಗಿಸುವುದಕ್ಕೆಂದು ಒಂದೊಂದೇ ಕ್ರಮಗಳನ್ನು ಕೈಗೊಳ್ಳತೊಡಗಿತು. ಮೊದಲನೆಯದು ನಿಶ್ಶಸ್ತ್ರೀಕರಣ. ಇದರಿಂದ ಸಂಸ್ಥಾನಿಕರು ಮತ್ತು ಜಮೀನುದಾರರು ತಮ್ಮಲ್ಲಿದ್ದ ಶಸ್ತ್ರಾಸ್ತ್ರಗಳನ್ನು ಕಂಪನಿ ಸರಕಾರಕ್ಕೆ ಒಪ್ಪಿಸಬೇಕಾಯ್ತು. ಆತ್ಮರಕ್ಷಣೆಯ ದೃಷ್ಟಿಯಿಂದ ತೀರ ಅವಶ್ಯವೆನಿಸುವ ಕೆಲವೊಂದು ಶಸ್ತ್ರಾಸ್ತ್ರಗಳಿಗೆ ಲೈಸನ್ಸ್ ಪಡೆಯಬೇಕೆಂಬ ಕಾನೂನೂ ಬಂತು. ಇದಕ್ಕನುಗುಣವಾಗಿ ಕತ್ತಿ, ಬಂದೂಕು, ಬರ್ಚಿ-ಭಾಲೆಗಳನ್ನು ಜನರಿಂದ ಕಸಿದುಕೊಳ್ಳಲಾಯ್ತು. ಇದರಿಂದ ಶ್ರೀಮಂತರೂ ದೊಡ್ಡ ಮನುಷ್ಯರೂ ಎನಿಸಿಕೊಂಡಿದ್ದ ಸಂಸ್ಥಾನಿಕರಿಗೆ ಮತ್ತು ಜಮೀನುದಾರರಿಗೆ ತುಂಬ ಅವಮಾನವೆನಿಸಿತು. ಈ ನಿಶ್ಶಸ್ತ್ರೀಕರಣದ ಕ್ರಮವನ್ನು ಪ್ರತಿಭಟಿಸಿ ಹಲಗಲಿಯ ಬೇಡರು ಪ್ರಾಣಗಳನ್ನೇ ತೆತ್ತರು. ಕೊನೆಗೂ ಶಸ್ತ್ರಾಸ್ತ್ರಗಳನ್ನು ಸರಕಾರಕ್ಕೆ ಒಪ್ಪಿಸಲಿಲ್ಲ.

ನರಗುಂದ ಸಂಸ್ಥಾನದ ಅಧಿಪತಿ ಭಾಸ್ಕರರಾಯ ಕಂಪನಿ ಸರಕಾರಕ್ಕೆ ಅಧೀನನಾಗಿದ್ದ. ಆತನದು ಪೇಶ್ವೆ ಶಾಹಿಗೆ ಸಂಬಂಧಪಟ್ಟಿದ್ದ ಭಾವೇ ಮನೆತನ. ಪ್ರಜಾಕಲ್ಯಾಣ ದೃಷ್ಟಿಯುಳ್ಳ ಭಾಸ್ಕರರಾಯ ಆಡಳಿತ ಕೌಶಲದಿಂದ ಅಪಾರ ಜನಪ್ರಿಯತೆಯನ್ನು ಸಂಪಾದಿಸಿದ್ದ.

ನರಗುಂದದ 'ಬಾಬಾ ಸಾಹೇಬ'ನೆಂದೇ ಆತ ಸುಪ್ರಸಿದ್ಧನಾಗಿದ್ದ. ಯಥಾಪ್ರಕಾರವಾಗಿ ನಿಶ್ಶಸ್ತ್ರೀಕರಣದ ಕಾನೂನು ಈತನಿಗೂ ಅನ್ವಯವಾಯ್ತು. ಅವನ ಹತ್ತಿರಿದ್ದ ತೋಫು, ಬಂದೂಕು, ಮದ್ದು-ಗುಂಡು ಇತ್ಯಾದಿಗಳನ್ನು ಕೂಡಲೇ ಸರಕಾರಕ್ಕೆ ಒಪ್ಪಿಸಬೇಕೆಂದು ಧಾರವಾಡದ ಕಲೆಕ್ಟರನಿಂದ ಆದೇಶ ಬಂತು. ಕಂಪನಿ ಸರಕಾರಕ್ಕೆ ನಿಷ್ಠೆಯಿಂದಲೇ ವರ್ತಿಸುತ್ತಿದ್ದ ಬಾಬಾಸಾಹೇಬನಿಗೆ ಈ ಆದೇಶ ನುಂಗಲಾರದ ತುತ್ತಾಯ್ತು. ಬ್ರಿಟಿಷರ ಮನೋಗತವನ್ನರಿತಿದ್ದ ಬಾಬಾಸಾಹೇಬ ಚಿಲ್ಲರೆ ಶಸ್ತ್ರಾಸ್ತ್ರಗಳನ್ನೆಲ್ಲ ಒಪ್ಪಿಸಿ, ತೋಫುಗಳನ್ನೂ ಮದ್ದು-ಗುಂಡುಗಳನ್ನೂ ಮಳೆಗಾಲ ನಿಂತ ಮೇಲೆ ಕಳಿಸುವುದಾಗಿ ಸರಕಾರಕ್ಕೆ ಉತ್ತರವಿತ್ತ.

ಕಂಪನಿ ಸರಕಾರ ಕೈಕೊಂಡ ಎರಡನೆಯ ಕ್ರಮವೆಂದರೆ ಇನಾಮು ರದ್ದತಿ. ಇದರಿಂದ ಉತ್ತರ ಕರ್ನಾಟಕದ ದೇಸಾಯಿ, ದೇಶಪಾಂಡೆ, ದೇಶಮುಖ, ಪಾಟೀಲ, ಕುಲಕರ್ಣಿ ಮುಂತಾದವರು ಪೇಶ್ವಾಯಿ ಆಡಳಿತದಲ್ಲಿ ಪಡೆದಿದ್ದ ಇನಾಮು ಜಮೀನುಗಳನ್ನು ಕಳೆದುಕೊಳ್ಳುತ್ತಿದ್ದರು. ಪೇಶ್ವೆರಾಜರಿಗೆ ಮಾಡಿದ್ದ ನಿಷ್ಠೆಯ ಸೇವೆಗಾಗಿ ಈ ಇನಾಮು ಜಮೀನುಗಳು ಅವರ ಪೂರ್ವಜರಿಗೆ ದೊರೆತಿದ್ದವು. ಈಗ ಇವರ ಸೇವೆ ಸರಕಾರಕ್ಕೆ ಅಗತ್ಯವಿಲ್ಲದ್ದರಿಂದ ಈ ಇನಾಮುಗಳನ್ನು ರದ್ದುಗೊಳಿಸುವುದಾಗಿ ಬ್ರಿಟಿಷರು ನಿರ್ಧರಿಸಿದ್ದರು. ಇನಾಮು ರದ್ದತಿಯಿಂದ ಈ ಹಕ್ಕುದಾರರು ಕಂದಾಯ ರಿಯಾಯಿತಿಯನ್ನು ಕಳೆದುಕೊಂಡು ಸಾಮಾನ್ಯ ಜಮೀನು ಒಡೆಯರಾಗುತ್ತಿದ್ದರು. ಇದರಿಂದ ಇನಾಮುದಾರರಿಗೆ ಈ ವರೆಗೆ ನಡೆದುಬಂದಿದ್ದ ಭೂಕಂದಾಯ ಮುಕ್ತತೆಯ ಮುಖ್ಯ ಗೌರವ ಮತ್ತು ಸವಲತ್ತುಗಳು ಇಲ್ಲದಂತಾಗುತ್ತಿತ್ತು. ಸರಕಾರದ ಈ ಕ್ರಮವೂ ನಿಶ್ಶಸ್ತ್ರೀಕರಣದಷ್ಟೇ ಅಪಮಾನಕಾರಕವೆನಿಸಿತು.

ಕರ್ನಾಟಕದಲ್ಲಿಯ ಎಲ್ಲ ಜಮೀನುದಾರರ ಒಡೆತನವು ಕ್ರಮಬದ್ಧವಾಗಿದೆಯೋ ಇಲ್ಲವೋ ಎಂಬುದನ್ನು ಪರಿಶೀಲಿಸಲು ಒಂದು "ಇನಾಮ್ ಕಮೀಷನ್" ಎಂಬ ವಿಚಾರಣಾ ಆಯೋಗವನ್ನು ನಿರ್ಮಾಣ ಮಾಡಿದರು. ಅದು ಕಾರ್ಯಾರಂಭ ಮಾಡಿತು. ಆಗ ಅನೇಕ ಸಂಸ್ಥಾನಿಕರು, ಜಮೀನುದಾರರು, ಜಹಾಗೀರುದಾರರು ಗಾಬರಿಗೊಂಡರು. ಎಷ್ಟೋ ಜಮೀನುಗಳ ಬಗ್ಗೆ ಹಕ್ಕಿನ ಆಧಾರಪತ್ರಗಳೇ ಇರಲಿಲ್ಲ. ಕೇವಲ ವಹಿವಾಟನ್ನು ಒಪ್ಪದೆ ಕಂಪನಿ ಸರಕಾರ ಅಂತಹ ಜಮೀನುಗಳನ್ನು ಜಪ್ತ ಮಾಡತೊಡಗಿತು. ಜಪ್ತಾದ ಜಮೀನುದಾರಿಗಳ ಸುದ್ದಿಗಳು ಎಲ್ಲೆಲ್ಲೂ ಹರಡಿ ಅಶಾಂತಿಯ ಕಿಚ್ಚನ್ನು ಹೆಚ್ಚಿಸಿದವು. ಪೂರ್ವಾರ್ಜಿತ ಆಸ್ತಿಗಳನ್ನೂ, ಗೌರವವನ್ನೂ ಕಳೆದುಕೊಂಡಿದ್ದ ಜಮೀನುದಾರರಿಗೆ ಕ್ರಾಂತಿಯೊಂದೇ ಪರಿಹಾರ ಮಾರ್ಗವಾಯ್ತು. ಐದು ವರುಷಗಳ ಪರಿಶೀಲನೆಯಲ್ಲಿ ೨೧,೦೦೦ ಆಸ್ತಿಗಳು ಆಧಾರಪತ್ರಗಳಿಲ್ಲದೆ ರದ್ದಾಗಿ ಸರಕಾರದ ವಶಕ್ಕೆ ಸೇರಿದವು. ನಷ್ಟ ತಗುಲಿದ ಈ ಎಲ್ಲ ಹೊಲದೊಡೆಯರೂ ಬ್ರಿಟಿಷರ ಕಡು ವೈರಿಗಳಾಗಿ ನರಗುಂದ ಮತ್ತು ಮುಂಡರಗಿ ಸಂಸ್ಥಾನಿಕರು ಹೂಡಿದ ಬ್ರಿಟಿಷ್ ವಿರೋಧಿ ಕ್ರಾಂತಿಯುದ್ಧಗಳಲ್ಲಿ ಪಾಲುಗೊಂಡರು.

"ಜಮಖಂಡಿ ಸಂಸ್ಥಾನಿಕನಂತೆ ಬ್ರಿಟಿಷ್‌ಕೈದಿಯಾಗಿ ಮಾನಭಂಗ ಹೊಂದುವ ಮೊದಲು ನಾನು ಪ್ರಾಣವನ್ನೇ ತೆರುತ್ತೇನೆ"—ಎಂದು ಬಾಬಾಸಾಹೇಬ ತನ್ನ ತಮ್ಮ ರಾಮದುರ್ಗದ ಸಂಸ್ಥಾನಿಕನಿಗೆ ಪತ್ರಬರೆದು, ತಾನು ಹೂಡುವ ಕ್ರಾಂತಿ-ಯುದ್ಧದಲ್ಲಿ ಸೇರಬೇಕೆಂದು ಆತನಿಗೆ ಕರೆ ಕೊಟ್ಟ. ಆದರೆ ರಾಮದುರ್ಗದ ಸಂಸ್ಥಾನಿಕ ಕಂಪನಿ ಸರಕಾರದ ವೈರ ಕಟ್ಟಿಕೊಳ್ಳಲು ಹೆದರಿ, ಆ ಪತ್ರವನ್ನು ಕಂಪನಿ ಸರಕಾರಕ್ಕೇ ಒಪ್ಪಿಸಿ ಬಿಟ್ಟ! ಕ್ರಾಂತಿಯಿಂದ ದೂರ ಸಿಡಿದು ನಿಂತ!

ಕಂಪನಿ ಸರಕಾರದ ರಾಜಕೀಯ ಸಲಹೆಗಾರ ಮ್ಯಾನ್ಸನ್ ಸಾಹೇಬನೇ ಜಮಖಂಡಿ ಸಂಸ್ಥಾನಿಕನನ್ನು ಬಂಧಿಸಿದ್ದ. ಆತನು ಈಗ ನರಗುಂದ ಸಂಸ್ಥಾನಕ್ಕೆ ಮುತ್ತಿಗೆಹಾಕಿ ಅದನ್ನು ವಶಪಡಿಸಿಕೊಳ್ಳಲು ಹಂಚಿಕೆಹಾಕಿದ.

ಈ ಸುದ್ದಿ ಬಾಬಾಸಾಹೇಬನಿಗೆ ತಿಳಿದಾಗ ಆತ ರೊಚ್ಚಿಗೆದ್ದ. ಮತ್ತು ಮ್ಯಾನ್ಸನ್ ಸಾಹೇಬನ ಚಲನವಲನಗಳನ್ನು ಸೂಕ್ಷ್ಮವಾಗಿ ಅವಲೋಕಿಸುತ್ತ ಹೋರಾಟದ ಸಿದ್ಧತೆಯಲ್ಲಿ ತೊಡಗಿದ.

೧೮೫೮ರ ಮೇ ೨೭ರಂದು ಬಾಬಾಸಾಹೇಬ ಬ್ರಿಟಿಷರ ವಿರುದ್ಧವಾಗಿ ಯುದ್ಧ ಸಾರಿಯೇಬಿಟ್ಟ. ದಿ. ೨೯ರ ಸಾಯಂಕಾಲ ರಾಮದುರ್ಗದಿಂದ ಮ್ಯಾನ್ಸನ್ ಸಾಹೇಬ ಕುದುರೆ ಹತ್ತಿಕೊಂಡು ಅಂಗರಕ್ಷಕರೊಡನೆ ಧಾರವಾಡಕ್ಕೆ ಹೊರಟ. ರಾತ್ರಿ ೧೦ ಗಂಟೆಗೆ ಸುರೆಬಾನ್ ಎಂಬ ಹಳ್ಳಿಗೆ ಬಂದು ತಲುಪಿದ. ಆ ರಾತ್ರಿ ಊರಹೊರಗಿನ ಹನುಮಂತದೇವರ ಗುಡಿಯಲ್ಲಿ ಎಲ್ಲರೂ ತಂಗಿದರು.

ಬಾಬಾಸಾಹೇಬನಿಗೆ ಇದರ ಸುಳಿವು ಹತ್ತಿ ಆ ಮಧ್ಯರಾತ್ರಿಯೇ ನೂರಾರು ಜನರೊಂದಿಗೆ ಮ್ಯಾನ್ಸನ್ ಸಾಹೇಬನ ಶಿಬಿರದ ಮೇಲೆ ದಾಳಿ ಮಾಡಿದ. ಶಿಬಿರದ ಕಾವಲುಗಾರರೂ ಇತರರೂ ಆ ದಾಳಿಯಲ್ಲಿ ಮಡಿದರು ವಿಷ್ಣು ಹಿರೇಕೊಪ್ಪ ಮತ್ತು ಇನ್ನಿತರ ನಾಲ್ಕೈದು ಜನರು ಗರ್ಭಗುಡಿಯೊಳಗೆ ಹೊಕ್ಕರು. ಮ್ಯಾನ್ಸನ್ ದೊರೆ ಎಚ್ಚತ್ತು ಪಿಸ್ತೂಲು ಹಾರಿಸಿದಾಗ ಒಬ್ಬನಿಗೆ ಗಾಯವಾಯ್ತು. ಅಷ್ಟರಲ್ಲಿಯೇ ಮ್ಯಾನ್ಸನ್ ಸಾಹೇಬನ ಶಿರಚ್ಛೇದವಾಗಿ ಹೋಯ್ತು! ಅವನ ದೇಹವನ್ನು ಅಲ್ಲಿಯೇ ಬಿಸುಟು, ಕ್ರಾಂತಿಕಾರರು ಆತನ ರುಂಡವನ್ನೊಯ್ದರು. ಮೇತಿಂಗಳು ೩೦ರ ಬೆಳಗಿನಲ್ಲಿಯೇ ನರಗುಂದದ ಅಗಸೆಬಾಗಿಲಲ್ಲಿ ಆ ರುಂಡವು ನೇತಾಡುತ್ತಿತ್ತು!

ಜೂನ್ ೧ನೆಯ ದಿನಾಂಕದಂದು ಬ್ರಿಟಿಷರು ನರಗುಂದದ ಕೋಟೆಗೆ ಮುತ್ತಿಗೆ ಹಾಕಿದರು. ಆಗ ದ್ರೋಹಿಗಳು ನರಗುಂದದ ಮದ್ದಿನ ಕೋಣೆಯಲ್ಲಿದ್ದ ಮದ್ದು-ಗುಂಡುಗಳನ್ನು ತೋಯಿಸಿ ಅವನ್ನು ನಿರರ್ಥಕಗೊಳಿಸಿದ್ದರು! ಆದರೂ ಎದೆಗುಂದದೆ ಬಾಬಾಸಾಹೇಬ ತನ್ನ ಸೈನಿಕರೊಂದಿಗೆ ಕೋಟೆಯ ಹೊರಗೆ ನುಗ್ಗಿ ಬ್ರಿಟಿಷ್ ಸೈನಿಕರೊಂದಿಗೆ ಹೋರಾಡಿದ. ಬ್ರಿಟಿಷರಿಗೆ ನರ

ಗುಂದದ ಕೋಟೆ ವಶವಾಯ್ತು. ಬಾಬಾ ಸಾಹೇಬನ ಅರಮನೆಯ ಲೂಟಿಯಾಯ್ತು. ಅಲ್ಲಿಯ ಅಮೂಲ್ಯ ಸಂಸ್ಕೃತ ಗ್ರಂಥಾಲಯ ನಾಶವಾಯ್ತು.

ನರಗುಂದ ಕೈಬಿಟ್ಟಿತೆಂದು ತಿಳಿದಾಗ ಬಾಬಾಸಾಹೇಬ ಕಣ್ಮರೆಯಾಗಿದ್ದ. ಆತನ ಧರ್ಮಪತ್ನಿ ಸಾವಿತ್ರಿಬಾಯಿ ಮತ್ತು ಮುಪ್ಪಿನ ತಾಯಿ ಯಮುನಾಬಾಯಿ ಆಂಗ್ಲರ ಕೈಗೆ ಸಿಗದೆ, ಮಲಪ್ರಭಾ ನದಿಯಲ್ಲಿ ಹಾರಿಕೊಂಡು ಪ್ರಾಣ ನೀಗಿದರು! ಬಾಬಾಸಾಹೇಬನನ್ನು ಹಿಡಿದುಕೊಟ್ಟವರಿಗೆ ೧೦,೦೦೦ ರೂಪಾಯಿಗಳ ಬಹುಮಾನವನ್ನು ಬ್ರಿಟಿಷರು ಸಾರಿದ್ದರು. ಇಷ್ಟರಲ್ಲಿಯೇ ತೊರಗಲ್ಲ ಹತ್ತಿರ ಆತನನ್ನು ಒಬ್ಬ ಪೋಲಿಸ್ ಅಧಿಕಾರಿ ಬಂಧಿಸಿದ.

ಬಾಬಾಸಾಹೇಬನ ವಿಚಾರಣೆ ನಡೆದು ಆತನಿಗೆ ಮರಣದಂಡನೆ ವಿಧಿಸಲ್ಪಟ್ಟಿತು. ಜನ ಸಮುದಾಯದ ಇದಿರಿನಲ್ಲೇ ಆತನನ್ನು ಬೆಳಗಾಂವಿಯಲ್ಲಿ ಗಲ್ಲಿಗೇರಿಸಲಾಯ್ತು!

ನರಗುಂದದ ಬಾಬಾಸಾಹೇಬ ಬ್ರಿಟಿಷರು ಮಾಡಿದ ಅನ್ಯಾಯಕ್ಕೆ ಬಾಗಿ ನಡೆಯದೆ, ಅವರೊಂದಿಗೆ ಪ್ರಾಣದ ಹಂಗುದೊರೆದು ಹೋರಾಡಿ ಮಡಿದ. ಬಾಬಾಸಾಹೇಬನ ಸ್ವಾಭಿಮಾನ, ಸ್ವಾತಂತ್ರ್ಯಪ್ರೀತಿ ಮತ್ತು ಸಾಹಸಪ್ರವೃತ್ತಿಗಳು ಅಪ್ರತಿಮವಾಗಿದ್ದವು. ಭಾರತದ ಸ್ವಾತಂತ್ರ್ಯಯೋಧರ ಚರಿತ್ರೆಯಲ್ಲಿ ಇವನಸ್ಥಾನ ಉನ್ನತವಾಗಿದೆ.

# ಸೈನಿಕರ ಕ್ರಾಂತಿ

ರಾಜಕೀಯ, ಸಾಮಾಜಿಕ, ಆರ್ಥಿಕ, ಹಾಗೂ ಧಾರ್ಮಿಕ ಕಾರಣಗಳಿಗಾಗಿ ಭಾರತೀಯರ ಮನಸ್ಸು ಕಂಪನಿಯ ಆಡಳಿತದ ವಿರುದ್ಧವಾಗಿ ಕುದಿಯುತ್ತಲೇ ಇತ್ತು. ಇದಕ್ಕೆ ಸೈನಿಕ ಕಾರಣಗಳೂ ಜತೆಗೂಡಿದವು.

ಆಂಗ್ಲರ ಸೇವೆಯಲ್ಲಿದ್ದ ಭಾರತೀಯ ಸಿಪಾಯಿಗಳು ಅವರೊಂದಿಗೆ ಸೌಹಾರ್ದ ಸಂಬಂಧ ಹೊಂದಿರಲಿಲ್ಲ. ಪರ್ಷಿಯದ ಕೊಲ್ಲಿ ದಂಡಯಾತ್ರೆ ಮುಂತಾದ ಸಂದರ್ಭಗಳಲ್ಲಿ ಸಮುದ್ರಯಾನ ಮಾಡಲು ಆಂಗ್ಲರು ಅವರನ್ನು ಒತ್ತಾಯಪಡಿಸಿದ್ದರು. ಸಮುದ್ರಯಾನದಿಂದ ತಮ್ಮ ಮತಧರ್ಮಗಳನ್ನು ಕಳೆದುಕೊಳ್ಳುವ ಭೀತಿ ಅವರಲ್ಲಿತ್ತು. ಅಲ್ಲದೆ ಸಂಬಳ, ಆಹಾರ, ಬಡ್ತಿ–ಈ ವಿಚಾರಗಳಲ್ಲಿ ಆಂಗ್ಲ ಸೈನಿಕರಿಗೂ ದೇಶೀಯ ಸಿಪಾಯಿಗಳಿಗೂ ತಾರತಮ್ಯ ಕಂಡುಬರುತ್ತಿತ್ತು. ಈ ರೀತಿಯ ಮಲತಾಯಿ ಧೋರಣೆಯಿಂದಾಗಿ ದೇಶೀಯ ಸಿಪಾಯಿಗಳ ಅಶಾಂತಿ ಹೆಚ್ಚಿತ್ತು. ಬಂಗಾಳದ ಸೈನ್ಯತುಕಡಿ ಯಾವಾಗಲೂ ಅಧಿಕಾರ ವರ್ಗಕ್ಕೆ ಅವಿಧೇಯವಾಗಿತ್ತು. ಎಲ್ಲಕ್ಕೂ ಮಿಗಿಲಾಗಿ ತಮಗೆ ಬರುತ್ತಿದ್ದ ಸಂಬಳದಲ್ಲಿ ಒಂದು ಭಾಗವನ್ನು ಅಧಿಕಾರಿಗಳ ಲಂಚಕ್ಕಾಗಿ ಬಡ ಸಿಪಾಯಿಗಳು ಮೀಸಲಿಡಬೇಕಿತ್ತು.—ಇವೇ ಮುಂತಾದ ಕಾರಣಗಳಿಂದ ಸಿಪಾಯಿಗಳಲ್ಲಿ ಅಶಾಂತಿ ಹೊಗೆಯಾಡುತ್ತಿತ್ತು. ಆದರೆ ಇದು ಸ್ಫೋಟಗೊಂಡ ರೀತಿ ಮಾತ್ರ ವಿಚಿತ್ರವಾಗಿತ್ತು !

ಜನವರಿ ೧೮೫೭ರಲ್ಲಿ 'ಡಂಡಂ' ಠಾಣೆಯಲ್ಲಿದ್ದ ಆಂಗ್ಲಸೇನೆಯ ಬ್ರಾಹ್ಮಣಸಿಪಾಯಿಯೊಬ್ಬ ತನ್ನ ಊಟದ ಸಿದ್ಧತೆಗಾಗಿ ನೀರು ತುಂಬಿದ ಲೋಟದೊಂದಿಗೆ ತನ್ನ ಚೌಕಕ್ಕೆ ನಿಧಾನವಾಗಿ ಹೊರಟಿದ್ದ. ದಾರಿಯಲ್ಲಿ ಕೆಳಜಾತಿಯ ಕೆಲಸಗಾರನೊಬ್ಬ ನೀರು ಕುಡಿಯಲು ಲೋಟ ಬೇಡಿದ. ಬ್ರಾಹ್ಮಣ

ಸಿಪಾಯಿ, ತಾನು ಲೋಟವನ್ನು ತೊಳೆದು ಶುಭ್ರಮಾಡಿದ್ದು, ಅದನ್ನು ಆತ ಮುಟ್ಟಿದಲ್ಲಿ ಮೈಲಿಗೆಯಾಗುವುದೆಂದು ಹೇಳಿ ಲೋಟ ಕೊಡಲಿಲ್ಲ. ಅದಕ್ಕೆ ಆ ಕೆಲಸಗಾರನು ಕೆಣಕುವ ದನಿಯಲ್ಲಿ,—"ನೀನು ನಿನ್ನ ಜಾತಿಯ ಬಗ್ಗೆ ಹೆಚ್ಚು ತಿಳಿದಿದ್ದೀ. ಸ್ವಲ್ಪ ತಾಳು, ಸಾಹಿಬ್‌ಲೋಗ್(ಆಂಗ್ಲರು)ಹಸು ಮತ್ತು ಹಂದಿಗಳ ಚರ್ಬಿ(ನೆಣ)ಸವರಿದ ತೋಟಾಗಳನ್ನು ನೀನು ಕಚ್ಚಬೇಕಾಗುತ್ತದೆ! ಆಗ ನಿನ್ನ ಜಾತಿಯೆಲ್ಲಿ?" ಎಂದು ಪ್ರಶ್ನಿಸಿದ. ಇದು ನಿಜವಾಗಿತ್ತು. ಚರ್ಬಿ ಸವರಿದ ತೋಟಾಗಳನ್ನು ಕೋವಿಗೆ ಹೊಂದಿಸುವ ಮೊದಲು ಅವನ್ನು ಬಾಯಿಂದ ಕಚ್ಚಿ ತೆಗೆಯಬೇಕಾಗಿತ್ತು.

ಇದನ್ನು ಕೇಳಿದ ಬ್ರಾಹ್ಮಣ ಸಿಪಾಯಿ ತಲ್ಲಣಿಸಿ ಹೋದ. ಈ ಕೆಟ್ಟ ಸಮಾಚಾರವನ್ನು ಆತ ತನ್ನ ಜತೆಗಾರರಿಗೆ ಕೂಡಲೆ ತಿಳಿಸಿದ. ಈ ಸುದ್ದಿ ಕಾಳ್ಗಿಚ್ಚಿನಂತೆ ಸೇನಾಶಿಬಿರಗಳಲ್ಲೆಲ್ಲಾ ಹಬ್ಬಿತು. ಹಿಂದೂ—ಮುಸಲ್ಮಾನ್ ಸಿಪಾಯಿಗಳು ತಮ್ಮ ಧಾರ್ಮಿಕ ಕಟ್ಟುಪಾಡಿಗೆ ಇದರಿಂದ ಧಕ್ಕೆ ಉಂಟಾಗುವುದೆಂದು ದಿಗಿಲುಗೊಂಡರು. ಸಮಾಜದಲ್ಲಿ ಬಹಿಷ್ಕಾರದ ಭೀತಿ ಹಿಂದೂ ಸಿಪಾಯಿಗಳನ್ನು ವಿಶೇಷವಾಗಿ ಕಾಡತೊಡಗಿತು. ತಮ್ಮನ್ನು ಮತಾಂತರಗೊಳಿಸಲೆಂದು ಸರಕಾರ ಹೂಡಿದ ಕುಟಿಲೋಪಾಯವಿದೆಂದು ಎಲ್ಲ ಸಿಪಾಯಿಗಳೂ ಭಾವಿಸಿದರು. ಮೊದಲು ಬ್ಯಾರಕ್‌ಪುರ್ ಠಾಣೆಯ ಸಿಪಾಯಿಗಳು ಭಾರತೀಯ ಸೈನಿಕ ಅಧಿಕಾರಿಗಳನ್ನು ಕೂಡಿಕೊಂಡು ತಮ್ಮ ಅಳಲನ್ನು ಸೈನಿಕ ಮೇಲಧಿಕಾರಿಗಳ ಮುಂದೆ ತೋಡಿಕೊಂಡರು. ಅಲ್ಲಿಯ ಮುಖ್ಯಾಧಿಕಾರಿ ಹಿಯರ್‌ಸೇ, ಅವರ ಬಿನ್ನಹವನ್ನು ಅರ್ಥಮಾಡಿಕೊಳ್ಳಲಿಲ್ಲ. ಸಿಪಾಯಿಗಳು ತಾವು ಬಳಸುವ ತೋಟಾಗಳಿಗೆ ಚರ್ಬಿ ಸವರಲು ಡಿಪೋಗಳಲ್ಲಿ ಅವಕಾಶ ಮಾಡಿಕೊಡಬೇಕೆಂದು ಶಿಫಾರಸು ಮಾಡಿದ. ತೋಟಾಗಳನ್ನು ತಯಾರಿಸುವ ವಿಧಾನವನ್ನು ಸ್ವತಃ ಪರೀಕ್ಷಿಸಲು ಅವರನ್ನು ಡಿಪೋಗಳಿಗೆ ಕರೆದುಕೊಂಡು ಹೋಗಬೇಕೆಂದು ಜವಾಬ್ದಾರಿಯುತ ಆಂಗ್ಲ ಅಧಿಕಾರಿಗಳು ಅಭಿಪ್ರಾಯಪಟ್ಟರು. ಆದರೆ ಸೈನ್ಯಾಧಿಕಾರಿಗಳು ಈ ಸೂಚನೆಯನ್ನು ತಿರಸ್ಕರಿಸಿದರು. ಆದರೆ ತೋಟಾಗಳನ್ನು ಬಾಯಿಂದ ಕಚ್ಚಿ ತೆಗೆಯಬೇಕೆಂಬ ನಿಯಮವನ್ನು ಸಡಿಲಿಸಿದರು. ಅವುಗಳ ತುದಿಗಳನ್ನು

ಕೈಯಿಂದ ತೆಗೆಯಬಹುದೆಂದೂ ತಿಳಿಸಿ ಹೇಳಿದರು. ಆಮೇಲೆ ಈ ಮಾದರಿಯ ತೋಟಾಗಳ ಬಳಕೆಯನ್ನೇ ನಿಲ್ಲಿಸಿದರು. ಇದಾವುದರಿಂದಲೂ ಸಿಪಾಯಿಗಳ ಅಶಾಂತಿ ದೂರವಾಗಲಿಲ್ಲ. ಯಾಕಂದರೆ ತೋಟಾಗಳ ಕಾರಣವು ಬಹಿರಂಗದ್ದು. ಒಳಗಿನ ಅಶಾಂತಿಯ ಕಾರಣಗಳು ಬೇರೆಯವೇ ಆಗಿದ್ದವು.

ಅಶಾಂತಿ ಕೂಡಲೇ ಉಗ್ರರೂಪ ತಳೆಯಿತು. ಬ್ಯಾರಕ್‌ಪೂರ್ ಮತ್ತು ರಾಣಿಗಂಜ್‌ಗಳಲ್ಲಿ ಸಿಪಾಯಿಗಳು ಬಹಿರಂಗ ಪ್ರತಿಭಟನೆಯನ್ನು ವ್ಯಕ್ತಪಡಿಸಿದರು. ಸಾರ್ವಜನಿಕ ಕಟ್ಟಡಗಳಿಗೆ ಮತ್ತು ಅಧಿಕಾರಿಗಳ ವಾಸಸ್ಥಾನಗಳಿಗೆ ಬೆಂಕಿಯಿಟ್ಟರು. ಬೆರ್‌ಹ್ಯಾಂಪೂರದ ಒಂದು ತುಕಡಿಯ ಸೈನಿಕರು ಕವಾಯತು ಮೈದಾನದಲ್ಲಿ ಈ ತೋಟಾಗಳ ಬಳಕೆಯನ್ನು ನಿರಾಕರಿಸಿದರು. ಅವರ ಮೇಲಧಿಕಾರಿ ಅವರನ್ನು ಹೀನಾಮಾನವಾಗಿ ನಿಂದಿಸಿದ. ಇದು ಅವರ ಶಂಕೆಯನ್ನು ಮತ್ತಷ್ಟು ಸ್ಥಿರಪಡಿಸಿತು. ಹೊಸ ತೋಟಾಗಳ ಗಾಳಿಸುದ್ದಿ ಮೀರತ್ ತಲುಪಿತು. ಮೀರತ್‌ನಲ್ಲಿ ನೆಲೆಗೊಂಡಿದ್ದ ಮೂರನೆಯ ಅಶ್ವದಳಕ್ಕೆ ಸೇರಿದ ತೊಂಭತ್ತು ರಾವುತರಲ್ಲಿ ಎಂಭತ್ತೈದು ರಾವುತರು ಕವಾಯತಿನಲ್ಲಿ ಹೊಸ ತೋಟಾಗಳನ್ನು ಮುಟ್ಟಲು ಕೂಡ ನಿರಾಕರಿಸಿದರು. ಈ ಅವಿಧೇಯತೆಗಾಗಿ ಅವರನ್ನು ಸೈನಿಕ ನ್ಯಾಯಾಲಯಗಳಲ್ಲಿ ವಿಚಾರಣೆಗೆ ಗುರಿಪಡಿಸಲಾಯ್ತು. ನ್ಯಾಯಾಲಯವು ಅವರಿಗೆ ಕಠಿಣ ದಂಡನೆ ವಿಧಿಸಿತು. ಆದರೆ ಈ ಘಟನೆ ಇಲ್ಲಿಗೇ ಮುಗಿಯಲಿಲ್ಲ. ಮಾರನೆಯ ದಿನ ಈ ಎಂಭತ್ತೈದು ಜನ ರಾವುತರನ್ನು ಕವಾಯತು ಮೈದಾನಕ್ಕೆ ಕರೆದೊಯ್ದು ಸಾರ್ವಜನಿಕವಾಗಿ ಅವರನ್ನು ಅವಮಾನಗೊಳಿಸಿದರು. ಈ ಎಂಭತ್ತೈದು ರಾವುತರನ್ನು ಅವರ ರೆಜಿಮೆಂಟಿನ ಉಡಿಗೆ ತೊಡಿಗೆಗಳೊಂದಿಗೆ ಫಿರಂಗಿ ಸಿಪಾಯಿಗಳ ರಕ್ಷಣೆಯಲ್ಲಿ ಕವಾಯತು ಸ್ಥಳಕ್ಕೆ ಕರೆತಂದು ಎಲ್ಲರ ಸಮಕ್ಷದಲ್ಲಿ ಅವರ ಅವಿಧೇಯತೆಗಾಗಿ ವಿಧಿಸಿದ ಶಿಕ್ಷೆಯನ್ನು ಓದಿದರು. ಅನಂತರ ಅವರ ಸಮವಸ್ತ್ರಗಳನ್ನು ಹಿಂದಿನಿಂದ ಕಳಚಿ, ಆಯುಧಗಳನ್ನು ಕಸಿದುಕೊಂಡರು. ಅವಮಾನಿತರಾದ ಆ ಗಣ್ಯ ರಾವುತರು ತಲೆಯೆತ್ತಿ ತಮಗೆ ಕರುಣೆ ತೋರಬೇಕೆಂದು ಬೇಡಿಕೊಂಡರೂ ಪ್ರಯೋಜನವಾಗಲಿಲ್ಲ!

ಇಂತಹ ಕರುಣಾಜನಕ ಸ್ಥಿತಿಯಲ್ಲಿ ಅವರನ್ನು ಸೆರೆಮನೆಗೆಳಗಟ್ಟಿ ಸೈನಿಕರ ಕಾವಲಿರಿಸಿದರು.

ಈ ಘಟನೆ ಅವರ ಜತೆಗಾರರೆಲ್ಲರನ್ನೂ ಕೆರಳಿಸಿತು. ಈ ಅಪಮಾನದ ಸೇಡು ತೀರಿಸಿಕೊಳ್ಳುವುದೆಂತು? ಅವಮಾನಿತ ರಾವುತರ ತುಕಡಿಯವರೇ ನಾಯಕತ್ವ ವಹಿಸಿದರು.

ಈ ಘಟನೆ ನಡೆದ ಗಿಜನೆಯ ದಿನ ಭಾನುವಾರ. ಆಂಗ್ಲ ಸೈನಿಕರು ಮತ್ತು ಅಧಿಕಾರಿಗಳು ಆಗ ಚರ್ಚಿನಲ್ಲಿದ್ದರು. ಆಗ ಈ ರಾವುತರು ದಂಗೆಯೆದ್ದು, ಜೈಲಿಗೆ ಧಾವಿಸಿ ತಮ್ಮ ಜತೆಗಾರರನ್ನೂ ಇತರ ಸೆರೆಯಾಳುಗಳನ್ನೂ ಬಿಡುಗಡೆಮಾಡಿಬಿಟ್ಟರು. ಕರ್ನಲ್ ಫಿನಿಸ್ ತನ್ನ ದಳದವರನ್ನು ಎಚ್ಚರಿಸುತ್ತಿದ್ದಾಗ ಇತರ ರೆಜಿಮೆಂಟಿನ ಸೈನಿಕರು ಆತನನ್ನು ಗುಂಡಿಕ್ಕಿ ಕೊಂದು ಹಾಕಿದರು. ಇದು ಈ ಸ್ವಾತಂತ್ರ್ಯ ಸಮರದಲ್ಲಿ ಹಾರಿಸಿದ ಮೊದಲ ಗುಂಡು! ಇತರ ಸೈನಿಕರೊಡನೆ ಸೆರೆಮನೆಯಿಂದ ಬಿಡುಗಡೆಹೊಂದಿದ್ದ ದುರಾಚಾರಿಗಳೂ ದುಷ್ಟರೂ ದಂಗೆಯಲ್ಲಿ ಸೇರಿದರು. ಭೀಕರ ಗೊಂದಲಸ್ಥಿತಿಯುಂಟಾಯ್ತು. ಅಂದು ರಾತ್ರಿಯೆಲ್ಲಾ ಯುರೋಪಿಯರ ಮನೆಗಳನ್ನು ಲೂಟಿಮಾಡಿ ಸುಟ್ಟುಹಾಕಿದರು. ಹೆಂಗಸರು ಮಕ್ಕಳೆನ್ನದೆ ಕೈಗೆ ಸಿಕ್ಕಿದವರನ್ನು ಕೊಂದುಹಾಕಿದರು. ಆ ರಾತ್ರಿ ಪೂರಾ ತಮ್ಮ ಅಪಮಾನದ ಸೇಡು ತೀರಿಸಿಕೊಂಡರು.

ಬಳಿಕ ಕ್ರಾಂತಿಕಾರೀ ಸೈನಿಕರು ನಸುಕಿನಲ್ಲಿಯೇ ದೆಹಲಿಯತ್ತ ಧಾವಿಸಿದರು. ಬೆಳಗಿನಲ್ಲಿ ದೆಹಲಿ ಸೇರಿದ ಕೂಡಲೆ ನೇರವಾಗಿ ಕೆಂಪುಕೋಟೆಗೆ ಹೋದರು. ಅಲ್ಲಿ ಮೊಗಲ್ ಸಾಮ್ರಾಟ್ ಬಹದ್ದೂರ್‌ಷಾನನ್ನು ಕ್ರಾಂತಿಯ ನಾಯಕತ್ವ ವಹಿಸಲು ಕೇಳಿಕೊಂಡರು. ಮೊದಮೊದಲು ಅನುಮಾನಿಸಿದರೂ ಕೊನೆಗೆ ಆತ ಒಪ್ಪಿದ. ಅವನನ್ನು ಹಿಂದುಸ್ಥಾನದ ಸಾಮ್ರಾಟ್ ಎಂದು ಘೋಷಿಸಿದರು. ಈ ವೇಳೆಗೆ ಇತರಕಡೆಗಳಿಂದ ಸೈನಿಕರು ಬಂದು ಮೀರತ್ ಸೈನಿಕರನ್ನು ಕೂಡಿಕೊಂಡರು. ಇಲ್ಲಿಯೂ ಮೀರತ್ ಕಥೆ ಮರುಕಳಿಸಿತು.

ಕೈಗೆ ಸಿಕ್ಕ ಎಲ್ಲ ಆಂಗ್ಲರನ್ನು ಕೊಂದು ಹಾಕಿದರು. ಕಂಪನಿ ಸರಕಾರದ ಆಡಳಿತಗಾರರೂ ಸೈನ್ಯಾಧಿಕಾರಿಗಳೂ ಕಂಗೆಟ್ಟುಹೋದರು. ದೆಹಲಿಯ ದಂಡುಪ್ರದೇಶದ ಸೈನಿಕರನ್ನು ಮತ್ತು ತಮ್ಮ ಅಧಿಕಾರಿ ವರ್ಗದವರನ್ನೂ ತೀರಿಸಿ, ಕ್ರಾಂತಿಕಾರರು ಸ್ವಾತಂತ್ರ್ಯಸಮರಸೇನೆಯನ್ನು ಸೇರಿಕೊಂಡರು. ಆಂಗ್ಲರು ಮತ್ತಷ್ಟು ದಿಗ್ಭ್ರಾಂತರಾದರು. ಆಗ ಅವರು ದಾರಿಗಾಣದೆ ಸೈನಿಕ ವಸ್ತುಗಳ ದಾಸ್ತಾನನ್ನು ನಾಶಪಡಿಸಿ, ದೆಹಲಿಯಿಂದ ಪಲಾಯನ ಮಾಡಿದರು. ಗಲಭೆ ಪ್ರಾರಂಭವಾದ ಒಂದು ವಾರದೊಳಗೆ ದೆಹಲಿಯಲ್ಲಿ ಒಬ್ಬ ಆಂಗ್ಲನೂ ಇಲ್ಲದಂತಾಯ್ತು. ಸ್ವಾತಂತ್ರ್ಯ ಸಂಗ್ರಾಮಯೋಧರು ಬಹದ್ದೂರ್‌ಷಾನ ಹೆಸರಿನಲ್ಲಿ ದೆಹಲಿಯ ಮೇಲೆ ತಮ್ಮ ಪ್ರಭುತ್ವ ಸ್ಥಾಪಿಸಿದರು.

ದೆಹಲಿಯನ್ನು ಕಳೆದುಕೊಂಡಿದ್ದು ಆಂಗ್ಲರ ಪ್ರತಿಷ್ಠೆಗೆ ಬಹುದೊಡ್ಡ ಆಘಾತವಾಗಿತ್ತು. ಸ್ವಾತಂತ್ರ್ಯಸಂಗ್ರಾಮದ ಭವಿಷ್ಯ ದೆಹಲಿಯ ಅದೃಷ್ಟ ವನ್ನೇ ಅವಲಂಬಿಸಿತ್ತು. ಇದೇ ವೇಳೆಗೆ ರಾಜಪುತ್ರಸ್ಥಾನ, ನಾಸಿರಾಬಾದ್, ರೋಹಿಲ್‌ಖಂಡದ ಬರೇಲಿ, ಝಾಂಸಿ, ಜಗದೀಶಪುರ ಮತ್ತು ಆರಾಗಳಲ್ಲಿ ಉದ್ಭವಿಸಿದ ಕ್ರಾಂತಿಗಳನ್ನು ಆಂಗ್ಲರು ಎದುರಿಸಬೇಕಾಯ್ತು. ನಾನಾಸಾಹೇಬನ ಸೈನಿಕರು ಆಂಗ್ಲರ ಚಿಕ್ಕ ಸೇನಾತುಕಡಿಯೊಂದನ್ನು ಕಾನಪುರದಲ್ಲಿ ಬಂಧಿಸಿದರು. ಸರ್‌ಹೆನ್ರಿಲಾರೆನ್ಸ್‌ನ ಸಣ್ಣ ದಳವೊಂದು ಲಕ್ನೌದಲ್ಲಿ ಬಂಧನಕ್ಕೊಳಗಾಗಿತ್ತು. ಜನರಲ್ ವೀಲರ್ ಅಲಹಾಬಾದಿನಲ್ಲಿ ಶರಣಾಗತನಾಗಿದ್ದ. ಕೊಲ್ಲಾಪುರ, ನರಗುಂದ, ಕೊಪ್ಪಳಗಳಲ್ಲೂ ಬಂಡಾಯ ಆರಂಭವಾಯ್ತು. "ಬಿಳಿಯ ಅಧಿಕಾರಿಯನ್ನು ಕೊಂದುಹಾಕಿ!" "ಸರಕಾರೀ ಕಛೇರಿಯನ್ನು (ಸೈತಾನೀ ದಫ್ತರ್) ಸುಟ್ಟುಹಾಕಿ!"—ಇದು ಅಂದಿನ ಸಮರ ಘೋಷಣೆ! ದೆಹಲಿಯಲ್ಲಿ ಸ್ವಾತಂತ್ರ್ಯಯೋಧರು ಗಳಿಸಿದ ಜಯ, ಬಿಳಿಯರ ಕೊಲೆ, ದೆಹಲಿಯಿಂದ ಅವರ ಪಲಾಯನ, ಇತ್ಯಾದಿ ವಾರ್ತೆಗಳು ಬಂದಾಗ ರೋಹಿಲ್ ಖಂಡ ಮತ್ತು ಔಧ ಸಂಸ್ಥಾನಗಳ ಜನ ಬ್ರಿಟಿಷ್ ರಾಜ್ಯದ ಅಂತ್ಯವಾಯಿತೆಂದೇ ಭಾವಿಸಿದರು. ಇದನ್ನು ನಿಜವಾಗಿಸಲು ತಮ್ಮ ಸರ್ವಸ್ವ ತ್ಯಾಗಕ್ಕೂ ಸಿದ್ಧರಾದರು. ದೇಶದ ನಾನಾಭಾಗಗಳಲ್ಲಿ ಆಂಗ್ಲರ ವಿರುದ್ಧವಾಗಿ ಸಶಸ್ತ್ರ

ದಂಗೆಯೆದ್ದಿತು. ಆಂಗ್ಲರ ಮುಂದೆ ಭಾರತದಲ್ಲಿ ಅವರ ಅಳಿವು-ಉಳಿವಿನ ಪ್ರಶ್ನೆ ಭೂತಾಕಾರ ತಳೆದು ನಿಂತಿತು!

ಆದರೆ ಕುಟಿಲತನದಲ್ಲಿ ಪಳಗಿದ ಆಂಗ್ಲರು ಪರಿಸ್ಥಿತಿಯನ್ನು ಅರಿತು ಎದುರಿಸಲು ಸಮರ್ಥರಾದರು. ಸುಮಾರು ನಾಲ್ಕು ತಿಂಗಳ ಹೋರಾಟದ ನಂತರ ದೆಹಲಿ ಅವರಿಗೆ ವಶವಾಯ್ತು. ಆಗ ದೆಹಲಿ ಜನ ಆಂಗ್ಲರ ಸೇಡಿನ ಕಿಚ್ಚನ್ನು ಎದುರಿಸಬೇಕಾಯ್ತು. ಇಡಿಯ ದೆಹಲಿನಗರವನ್ನು ಆಂಗ್ಲ ಸೇನೆ ಕೊಳ್ಳೆಹೊಡೆಯಿತು. ನಿರಪರಾಧಿಗಳೆಷ್ಟೋ ಕೊಲೆಗೀಡಾದರು. ಬಹದ್ದೂರ್‌ಷಾ ಬಂಧನಕ್ಕೊಳಗಾದ. ಆತನ ಮಕ್ಕಳು-ಮೊಮ್ಮಕ್ಕಳನ್ನು ಆಂಗ್ಲ ಸೈನಿಕರು ನಿಷ್ಕರುಣೆಯಿಂದ ಬೀದಿಯಲ್ಲಿ ಗುಂಡಿಕ್ಕಿ ಕೊಂದರು!

# ಭಾರತೀಯರು ಕಲಿತ ಅಮೂಲ್ಯ ಪಾಠ

ಈ ಎಲ್ಲ ದಂಗೆಯ ಘಟನೆಗಳು ಈಸ್ಟ್ ಇಂಡಿಯಾ ಕಂಪನಿಯ ಆಡಳಿತದ ಅಸಮರ್ಥತೆಯನ್ನು ಬಹಿರಂಗಗೊಳಿಸಿದವು. ೧೮೫೮ರಲ್ಲಿ ಬ್ರಿಟಿಷ್ ಸರಕಾರ ಭಾರತದ ಆಡಳಿತ ಸೂತ್ರಗಳನ್ನು ತಾನೇ ವಹಿಸಿಕೊಂಡಿತು. ಕಂಪನಿಯ ಆಡಳಿತ ಇಲ್ಲಿಗೆ ಕೊನೆಗೊಂಡಿತು.

ಭಾರತದ ರಾಜಮಹಾರಾಜರು ಹಾಗೂ ಸೈನಿಕರು ಆರಂಭಿಸಿದ ಈ ಮೊದಲ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹಲವೆಡೆಗಳಲ್ಲಿ ಸಾಮಾನ್ಯ ಪ್ರಜೆಗಳೂ ಪಾಲ್ಗೊಂಡರು. ದೇಶಪ್ರೇಮದ ಸಮಸ್ತ ಜೀವಾಂಕುರಗಳು ಇದರಲ್ಲಿ ಅಡಗಿದ್ದವು. ದೇಶದ ಸ್ವಾತಂತ್ರ್ಯ ಸಾಧನೆಗೆ ಜೀವವೆಷ್ಟು ಕ್ಷುದ್ರವೆಂಬುದನ್ನು ಭಾರತೀಯರು ಪ್ರಕಟಗೊಳಿಸಿದರು. ಇಂತಹ ಪವಿತ್ರ ಹಾಗೂ ಉನ್ನತ ಉದ್ದೇಶ ಹೊಂದಿದ್ದ ಈ ವ್ಯಾಪಕ ಆಂದೋಲನದಲ್ಲಿ ಭಾರತೀಯ ದೇಶಪ್ರೇಮಿಗಳ ಸಾಹಸಕ್ಕೆ ಸೋಲಾಯ್ತು. ಅನ್ಯಾಯ, ಪಶುಬಲ–ಇವುಗಳಿಗೆ ಗೆಲುವಾಯ್ತು. ಬ್ರಿಟಿಷರ ಹಿಡಿತ ಇನ್ನಷ್ಟು ಬಲಗೊಂಡಿತು. ಆದರೆ ಸಾವನ್ನು ಗೆದ್ದ ಸ್ವಾತಂತ್ರ್ಯವೀರರ ದೇಶಪ್ರೇಮಕ್ಕೆ ಸೋಲೆಂಬುದುಂಟೆ? ಸ್ವಾರ್ಥ ಹಾಗೂ ಸಂಕುಚಿತತನಗಳನ್ನು ತೊರೆದು ಒಕ್ಕಟ್ಟಿನಿಂದ ಹೋರಾಡಿದಲ್ಲಿ ಗುರಿಯನ್ನು ಸಾಧಿಸಿಕೊಳ್ಳಬಹುದು ಎಂಬ ಪಾಠವನ್ನು ಭಾರತೀಯರು ಆಗ ಕಲಿತುಕೊಂಡರು. ೧೮೫೭ರಿಂದ ೧೯೪೭ರ ವರೆಗಿನ ತೊಂಭತ್ತುವರುಷ ಭಾರತೀಯರು ಈ ಅಮೂಲ್ಯ ಪಾಠವನ್ನು ಮನನಮಾಡಿಕೊಂಡ ಕಾಲ. ೧೮೫೭ರ ದೇಶಪ್ರೇಮಿಗಳ ಪ್ರಾಣಾರ್ಪಣೆ ವ್ಯರ್ಥವಾಗಲಿಲ್ಲ. ಇದು ಭಾರತೀಯರಲ್ಲಿ ನವ ಚೈತನ್ಯವನ್ನು ಚಿಗುರಿಸಿತು! ಈ ನವಚೇತನವೇ ಹೆಮ್ಮರವಾಗಿ ೧೯೪೭ರಲ್ಲಿ ಫಲ ಕೊಟ್ಟಿತು.

## ೩. ಭಾರತದ ಪುನರುತ್ಥಾನ

### ರಾಜಾ ರಾಮಮೋಹನ ರಾಯ್

ಹಲವು ಶತಮಾನಗಳವರೆಗೆ ಮುಸಲ್ಮಾನ್, ಮೊಗಲ್ ಅರಸರ ಆಳ್ವಿಕೆಯಲ್ಲಿ ಭಾರತ ಮಾನಸಿಕ ಜಡತ್ವವನ್ನು ತಾಳಿತ್ತು. ತತ್ವ, ವಿಜ್ಞಾನ, ವೈದ್ಯಕೀಯ ಶಾಸ್ತ್ರಗಳಲ್ಲಿ ಹಲವು ಸಾವಿರ ವರ್ಷಗಳ ಹಿಂದೆಯೇ ಅದ್ವಿತೀಯ ಮುನ್ನಡೆಯನ್ನು ಸಾಧಿಸಿದ್ದ ಭಾರತ ಅರ್ಥಹೀನ ಆಚಾರ-ವಿಚಾರ, ಮೂಢ ನಂಬಿಕೆಗಳಿಗೆ ತವುರಾಯಿತು. ವ್ಯಾಪಾರಕ್ಕಾಗಿ ಭಾರತಕ್ಕೆ ಬಂದ ಯುರೋಪೀಯರ ಮೂಲಕ ಪಾಶ್ಚಾತ್ಯರ ಆಧುನಿಕ ವಿಜ್ಞಾನ, ಸಾಮಾಜಿಕ ಪದ್ಧತಿಗಳ ಸಂಪರ್ಕ ಬಂದು, ಭಾರತೀಯರು ತಮ್ಮ ಸಾಮಾಜಿಕ ದುಸ್ಥಿತಿಯನ್ನು ಅರಿತುಕೊಳ್ಳುವಂತಾಯಿತು. ಈ ಅರಿವು ಹಲವು ದೋಷಗಳನ್ನು ತಿದ್ದಿಕೊಳ್ಳಲು ಸಹಾಯಕಾರಿಯಾಯಿತು.

ರಾಜಾ ರಾಮಮೋಹನ ರಾಯ್ ಈ ನವೋದಯದ ಕಾರಣಪುರುಷರು. ಚುರುಕುಬುದ್ಧಿಯ ರಾಯ್ ಬೆಂಗಾಳಿ, ಪರ್ಶಿಯನ್, ಅರೇಬಿಕ್ ಭಾಷೆಗಳಲ್ಲಿ ಪರಿಣತಿ ಪಡೆದು ಮುಸಲ್ಮಾನ್ ಧರ್ಮ ಗ್ರಂಥವಾದ ಕೋರಾನನ್ನು ಮೂಲ ರೂಪದಲ್ಲಿ ಅಭ್ಯಸಿಸಿದರು. ಹಾಗೆಯೆ ಮುಂದೆ ಕಾಶಿಯಲ್ಲಿ ಉಪನಿಷತ್ತು ಮತ್ತು ಪುರಾಣಗಳನ್ನು ಸಂಸ್ಕೃತ ಮೂಲದಲ್ಲಿ ಅಭ್ಯಸಿಸಿದರು. ಉಪನಿಷತ್ತಿನ ಏಕದೇವ ವಾದವನ್ನು ಮೆಚ್ಚಿದ ಇವರು ಆಗ ಪ್ರಚಲಿತವಿದ್ದ ಹಿಂದೂ ಆಚಾರ ವ್ಯವಹಾರಗಳಿಂದ ತೀರ ಅಸಮಾಧಾನಗೊಂಡರು. ಪಾಶ್ಚಾತ್ಯ ವಿದ್ವಾಂಸರ ಸಂಗದಿಂದ ಪ್ರಭಾವಿತರಾದ ರಾಯ್ ಮೂರ್ತಿಪೂಜೆಯನ್ನೂ ಮೂಢನಂಬಿಕೆಗಳನ್ನೂ

ಖಂಡಿಸುತ್ತಿದ್ದರು. ಸ್ತ್ರೀಯರ ಕಷ್ಟಗಳನ್ನರಿತು, ಅವರ ಪಕ್ಷ ವಹಿಸಿ ಬಲವಾಗಿ ಪ್ರತಿಪಾದಿಸಿದ ಭಾರತೀಯರಲ್ಲಿ ಇವರೇ ಮೊದಲನೆಯವರು. ಸಹಗಮನ ಪದ್ಧತಿಗೆ ಮೊದಲ ಏಟು ಕೊಟ್ಟವರೂ ಇವರೇ.

ಸಹಗಮನ ಪದ್ಧತಿಯ ಬಗ್ಗೆ ರಾಯ್ ಅವರು ತಳೆದಿದ್ದ ವಿರೋಧವು ಅತಿ ತೀಕ್ಷ್ಣವಾಗಿತ್ತು. ಇದಕ್ಕೆ ಕಾರಣ ರಾಯ್ ಅವರ ಮನೆತನದಲ್ಲೇ ನಡೆದಿದ್ದ ಸಹಗಮನದ ಒಂದು ದುರ್ಘಟನೆ. ಅದು ಅವರ ಮನಸ್ಸಿನಲ್ಲಿ ಅಚ್ಚಳಿಯದೆ ನಿಂತಿತ್ತು. ರಾಯ್ ಅವರ ಸೋದರ ಜಗಮೋಹನ್ ಸತ್ತಾಗ, ಪತಿಪರಾಯಣ ಳಾಗಿದ್ದ ಅವರ ಪತ್ನಿ ಪತಿಯ ಚಿತೆಯಲ್ಲಿ ಸಹಗಮನ ಮಾಡಲು ಸಿದ್ಧಳಾದಳು. ರಾಯ್ ಅವರು ಎಷ್ಟು ಪ್ರಯತ್ನಿಸಿದರೂ ಆ ಸತಿ ಅಚಲರಾಗಿದ್ದರಿಂದ ಆ ಸಹಗಮನವನ್ನು ತಪ್ಪಿಸಲು ಸಾಧ್ಯವಾಗಲಿಲ್ಲ. ಆಕೆ ಏಕಾಗ್ರತೆಯಿಂದ ಪತಿಯ ಶವದೊಡನೆ ಚಿತೆಯನ್ನೇರಿದಳು. ಚಿತೆಗೆ ಇಟ್ಟ ಬೆಂಕಿ ಆ ಸತಿಯ ಶರೀರವನ್ನು ಸುಡಲು ಆರಂಭಿಸಿದಾಗ, ಅದನ್ನು ಸಹಿಸಲಾಗದೆ ಆ ಆಪತ್ತಿನಿಂದ ಪಾರಾಗಿ ತಪ್ಪಿಸಿಕೊಳ್ಳಲು ಆಕೆ ಪ್ರಯತ್ನಿಸಿದಳು. ಆದರೆ ಅಲ್ಲಿದ್ದ ಆಕೆಯ ಸಂಬಂಧಿಗಳು ಇದು ಅಪಶಕುನ ಮತ್ತು ದೈವದ್ರೋಹವೆಂದು ಭಾವಿಸಿ, ದೊಡ್ಡ ಬೊಂಬು ಗಳಿಂದ ಆಕೆ ಚಿತೆಯಿಂದೇಳದಂತೆ ಬಿಗಿಯಾಗಿ ಹಿಡಿದು ಆಕೆಯ ಚೀತ್ಕಾರ ಕೇಳದಂತೆ ಮದ್ದಲೆಗಳನ್ನು ಬಾರಿಸಿದರು!

ಕಠೋರವೂ ಅಮಾನುಷವೂ ಆದ ಈ ಘಟನೆಯಿಂದ ರಾಯ್ ಅವರ ಹೃದಯ ತಲ್ಲಣಿಸಿತು. ಅಸಹನೀಯವಾದ ಈ ದುರದೃಷ್ಟ ಘಟನೆಯನ್ನು ತಾವು ಅಸಹಾಯಕತೆಯಿಂದ ನೋಡಬೇಕಾಯಿತಲ್ಲ ಎಂದು ರಾಯ್ ಬಹು ಕಾಲ ಪೇಚಾಡಿದರು. ಬಲಾತ್ಕಾರದ ಸಹಗಮನದಂಥ ಈ ಕ್ರೂರ ಮೂಢ ನಂಬಿಕೆಯಿಂದ ಹಿಂದೂ ಸ್ತ್ರೀಯರನ್ನು ವಿಮೋಚನೆಗೊಳಿಸುವ ಪ್ರತಿಜ್ಞೆಯನ್ನು ಆ ದಿನವೇ ಅವರು ಕೈಕೊಂಡರು. ಸ್ವಜನ ವಿರೋಧಕ್ಕೆ ಹೆದರದೆ ಅವರು ತಮ್ಮ ಬರೆವಣಿಗೆ ಹಾಗೂ ಭಾಷಣಗಳಲ್ಲಿ ಸಹಗಮನ ಪದ್ಧತಿಯನ್ನು ವಿರೋಧಿಸಿ ಪ್ರಗತಿಶೀಲರ ಮನಸ್ಸನ್ನು ಸೆಳೆದರು.

ಕ್ರೂರವಾದ ಸಹಗಮನ ಪದ್ಧತಿಯನ್ನು ಮೌನವಾಗಿ ಗಮನಕ್ಕೆ ಬಾರದಂತೆ ನಿಲ್ಲಿಸಬೇಕೆಂಬುದು ಇವರ ಆಶಯವಾಗಿತ್ತು. ಆದರೆ ಲಾರ್ಡ್ ಬೆಂಟಿಂಕ್ ೧೮೨೯ರಲ್ಲಿ ಸತೀಪದ್ಧತಿಯನ್ನು ನಿಲ್ಲಿಸಲು ಶಾಸನಮಾಡಿದಾಗ ಅವನಿಗೆ ರಾಯ್ ಪೂರ್ಣ ಬೆಂಬಲ ಕೊಟ್ಟರು. ಹೀಗೆಯೆ ವಿಧವಾವಿವಾಹ, ಸ್ತ್ರೀ ಶಿಕ್ಷಣ, ಆಸ್ತಿಯಲ್ಲಿ ಸ್ತ್ರೀಯರಿಗೆ ಪಾಲು ಇತ್ಯಾದಿ ವಿಚಾರಗಳನ್ನೂ ಅವರು ಪ್ರತಿಪಾದಿಸಿದರು. ಜಾತಿಭೇದವನ್ನು ಖಂಡಿಸಿ ಅಂತರ್ಜಾತೀಯ ವಿವಾಹಗಳನ್ನೂ ಅವರು ಸಮರ್ಥಿಸಿದರು.

ಧಾರ್ಮಿಕ ಜೀವನದಲ್ಲಿಯ ಜಡತೆಯ ವಿರುದ್ಧವೂ ಇವರು ಕ್ರಾಂತಿಯೆಬ್ಬಿಸಿದರು. ವಿಶ್ವದ ಎಲ್ಲ ಧರ್ಮಗಳೂ ಏಕದೇವ ವಾದವನ್ನೇ ಪ್ರತಿಪಾದಿಸುತ್ತವೆಂದು ತಿಳಿಸುತ್ತ ೧೮೧೫ರಲ್ಲಿ 'ಆತ್ಮೀಯ ಸಭಾ' ಸಂಸ್ಥೆಯನ್ನೂ, ೧೮೨೬ರಲ್ಲಿ ವೇದಾಂತ ಕಾಲೇಜನ್ನೂ, ೧೮೨೮ರಲ್ಲಿ ಸಾಮಾಜಿಕ ಹಾಗೂ ಧಾರ್ಮಿಕ ಧ್ಯೇಯಗಳ ಪ್ರತಿಪಾದನೆಗಾಗಿ 'ಬ್ರಹ್ಮ ಸಮಾಜ'ವನ್ನೂ ಸ್ಥಾಪಿಸಿದರು.

ಪತ್ರಿಕೋದ್ಯಮದಲ್ಲಿಯೂ ರಾಯ್ ಮೊದಲಿಗರು. ಚಾರಿತ್ರಿಕ, ಸಾಹಿತ್ಯಿಕ ಮತ್ತು ವೈಜ್ಞಾನಿಕ ವಿಚಾರಗಳಿಗೆ ಮೀಸಲಾದ 'ಕೌಮುದಿ' ಎಂಬ ವಾರಪತ್ರಿಕೆಯನ್ನು ಬಂಗಾಳಿಯಲ್ಲೂ, 'ಮಿರತ್ ಉಲ್ ಅಕ್ಬರ್' ಎಂಬ ವಾರಪತ್ರಿಕೆಯನ್ನು ಪರ್ಶಿಯನ್ ಭಾಷೆಯಲ್ಲೂ ಹೊರಡಿಸುತ್ತಿದ್ದರು.

ರಾಯ್ ಆಂಗ್ಲ ವಿದ್ಯಾಭ್ಯಾಸಕ್ಕೆ ಆದ್ಯತೆಯನ್ನು ಕೊಟ್ಟರು. ಆಂಗ್ಲ ಭಾಷೆ ಹೊರಪ್ರಪಂಚದ ಕಿಟಕಿ ಎಂದು ಅವರು ನಂಬಿದ್ದರು. ಆಂಗ್ಲ ವಿದ್ಯಾಭ್ಯಾಸವು ರಾಯ್ ಅವರು ತೀರಿಕೊಂಡ ಮೇಲೆ ಆರಂಭವಾದರೂ ರಾಯ್ ಅವರು ಹೇಳುತ್ತಿದ್ದಂತೆ ಈ ಶಿಕ್ಷಣವು ದೇಶದಲ್ಲಿ ರಾಷ್ಟ್ರೀಯ ಭಾವನೆಯನ್ನು ಜಾಗೃತಗೊಳಿಸಿತು. ಹೀಗೆ ರಾಜಾ ರಾಮಮೋಹನ ರಾಯ್ ಜನತೆಯ ಸರ್ವತೋಮುಖ ಬೆಳವಣಿಗೆಗೆ ಶ್ರಮಿಸಿ ಆಧುನಿಕ ಭಾರತದ ನಿರ್ಮಾಪಕರೆನಿಸಿದ್ದಾರೆ.

# ಸ್ವಾಮಿ ದಯಾನಂದ ಸರಸ್ವತಿ

ಸಮಾಜದ ಅರ್ಥಹೀನ ನೀತಿ ನಿಯಮಗಳ ವಿರುದ್ಧ ಆಂದೋಳನ ನಡೆಸಿದ ಪ್ರಸಿದ್ಧ ವ್ಯಕ್ತಿಗಳಲ್ಲಿ ದಯಾನಂದ ಸರಸ್ವತಿ ಒಬ್ಬರಾಗಿದ್ದಾರೆ. ಅವರು ಗುಜರಾತಿನ ಸಂಪ್ರದಾಯಸ್ಥ ಮನೆತನದಲ್ಲಿ ೧೮೨೪ರಲ್ಲಿ ಜನಿಸಿದರು. ಅವರ ತಂದೆ ಸಂಪ್ರದಾಯಕ್ಕೆ ಪೂರಾ ಶರಣು ಹೋಗಿದ್ದರು. ಒಮ್ಮೆ ಶಿವರಾತ್ರಿಯ ಜಾಗರಣೆಗಾಗಿ ಅವರ ತಂದೆ ಅವರನ್ನು ಶಿವದೇವಾಲಯಕ್ಕೆ ಕರೆದುಕೊಂಡು ಹೋದರು. ಆಗ ಅವರಿಗೆ ೧೪ ವರ್ಷ ವಯಸ್ಸು. ಹಿರಿಯರೆಲ್ಲರೂ ಶಿವ ನಾಮ ಜಪಿಸುತ್ತ ಜಾಗರಣೆಯಲ್ಲಿ ತೊಡಗಿರುವಾಗ, ಶಿವನಿಗೆ ನೀಡಿದ್ದ ನೈವೇದ್ಯವನ್ನು ಒಂದು ಇಲಿ ತಿನ್ನುತ್ತಿರುವುದನ್ನು ಬಾಲಕ ದಯಾನಂದ ಕಂಡರು. ಶಿವನಿಗೆ ಇಲಿ ಎಸಗಿದ ಈ ಅನ್ಯಾಯವನ್ನು ಕಣ್ಣಾರೆ ಕಂಡ ಅವರಿಗೆ ಏನೂ ತೋಚದ ಹಾಗೆ ಆಯಿತು. ದೇವಾಲಯದಲ್ಲಿರುವ ಶಿವಲಿಂಗವು ತನ್ನನ್ನು ರಕ್ಷಿಸಿಕೊಳ್ಳಲಾರದೆಂದರೆ ಅದು ಶಿವನೇ ಅಲ್ಲವೆಂದು ಅವರಿಗೆ ಮನವರಿಕೆಯಾಯಿತು. ಇದರಿಂದ ಅವರಿಗೆ ಸಾಂಪ್ರದಾಯಿಕ ಧರ್ಮದ ಮೇಲಿದ್ದ ವಿಶ್ವಾಸ ಹಾರಿ ಹೋಯ್ತು.

ತಂದೆತಾಯ್ಗಳ ಮನಸ್ಸಿನ ವಿರುದ್ಧವಾಗಿ ಅವರು ಸನ್ಯಾಸ ಜೀವನವನ್ನಾರಂಭಿಸಿದರು. ತಮ್ಮ ಧ್ಯೇಯಗಳಿಗೆ ಶಾಶ್ವತ ರೂಪು ಕೊಡಲು ಅವರು 'ಆರ್ಯ ಸಮಾಜ' ಸಂಸ್ಥೆಯನ್ನು ಸ್ಥಾಪಿಸಿದರು. ಇದು ಸಾಮಾಜಿಕ, ಧಾರ್ಮಿಕ ಮತ್ತು ಶೈಕ್ಷಣಿಕ ಆಂದೋಳನದ ಕೇಂದ್ರವಾಯ್ತು. ಎಲ್ಲ ಧರ್ಮಗಳಿಗಿಂತ ಹಿಂದೂ ಧರ್ಮ ಶ್ರೇಷ್ಠವೆಂದು ಅವರು ಪ್ರತಿಪಾದಿಸುತ್ತಿದ್ದರು. ಮುಸಲ್ಮಾನ್ ಮತ್ತು ಕ್ರೈಸ್ತ ಪಂಡಿತರೊಂದಿಗೆ ಸಾರ್ವಜನಿಕವಾಗಿ ವಾದಿಸಿ, ಹಿಂದೂ ಧರ್ಮದ ಶ್ರೇಷ್ಠತೆಯನ್ನು ಯುಕ್ತಿಯುಕ್ತವಾಗಿ ಎತ್ತಿ ಹಿಡಿಯುತ್ತಿದ್ದರು. ಮುಸಲ್ಮಾನ್ ಮತ್ತು ಕ್ರೈಸ್ತ ಧರ್ಮಗಳಿಗೆ ಮತಾಂತರಗೊಂಡಿದ್ದ

ಹಿಂದೂಗಳನ್ನು 'ಶುದ್ಧಿ' ಎಂಬ ಕ್ರಮಾಚರಣೆಯಿಂದ ಹಿಂದೂ ಧರ್ಮಕ್ಕೆ ಮತ್ತೆ ಬರಮಾಡಿಕೊಳ್ಳುವ ವಿಧಾನವನ್ನು ಆರಂಭಿಸಿದರು. ಅವರ 'ಸತ್ಯಾರ್ಥ ಪ್ರಕಾಶ'ವು ಆರ್ಯ ಸಮಾಜ ತತ್ವಗಳ ಗ್ರಂಥ. ಹಿಂದೂ ಧರ್ಮ ಮತ್ತು ನೀತಿ ನಿಯಮಗಳ ನೈಜತೆ ವೇದಗಳಲ್ಲೇ ಕಂಡುಬರುವುದೆಂದು ಅವರು ವಾದಿಸುತ್ತಿದ್ದರು. 'ವೇದಗಳಿಗೆ ಮರಳಿ' ಎಂಬುದು ಅವರ ಘೋಷಣೆಯಾಗಿತ್ತು. ಅವರೂ ರಾಯ್ ಅವರಂತೆ ಏಕದೇವ ವಾದಿಯಾಗಿದ್ದು, ಮೂರ್ತಿ ಪೂಜೆಯಲ್ಲಿ ಅವರಿಗೆ ನಂಬುಗೆ ಇರಲಿಲ್ಲ. ಜಾತಿ ಭೇದಗಳನ್ನು ವಿರೋಧಿಸುತ್ತ ವೇದ ಕಾಲದ ಚಾತುರ್ವರ್ಣ್ಯ ಪದ್ಧತಿಯ ಮೇಲೆ ಸಮಾಜ ಕಟ್ಟುವ ವಿಚಾರ ಅವರದಾಗಿತ್ತು. ಮನುಷ್ಯ, ಪ್ರಾಣಿ, ಪಕ್ಷಿ— ಇವೇ ಮೂರು ಜಾತಿಗಳನ್ನು ಮಾತ್ರ ಅವರು ಮಾನ್ಯ ಮಾಡುವುದಾಗಿ ಹೇಳುತ್ತಿದ್ದರು. ಸ್ತ್ರೀ ಪುರುಷರ ಯೋಗ್ಯತೆಯರಿತು ಅವರವರ ಜಾತಿಯನ್ನು ನಿರ್ಣಯಿಸಬೇಕೆಂದು ಅವರ ಅಭಿಪ್ರಾಯ. ಸಮಾಜ ಸುಧಾರಣೆಯ ದೃಷ್ಟಿಯಿಂದ ಬಹುಪತ್ನೀತ್ವ, ಬಾಲ್ಯವಿವಾಹ ಮುಂತಾದ ಪದ್ಧತಿಗಳನ್ನು ಅವರು ನಿಷೇಧಿಸುತ್ತಿದ್ದರು. ಪುರುಷರು ೨೫ನೆಯ ವಯಸ್ಸಿನಲ್ಲಿಯೂ, ಸ್ತ್ರೀಯರು ೧೬ನೆಯ ವಯಸ್ಸಿನಲ್ಲಿಯೂ ಮದುವೆಯಾಗುವುದು ಕ್ಷೇಮವೆಂದು ಅವರ ಅಭಿಪ್ರಾಯವಾಗಿತ್ತು. ಅಸ್ಪೃಶ್ಯತೆಯನ್ನು ಖಂಡಿಸುತ್ತ ಅಸ್ಪೃಶ್ಯರಿಗೆ ಆರ್ಯ ಸಮಾಜದ ಬಾಗಿಲು ತೆರೆದಿಟ್ಟರು. ಆರ್ಯಸಮಾಜವು ಲಕ್ಷಾಂತರ ಜನ ಅಸ್ಪೃಶ್ಯರಿಗೆ ಉಪನಯನ ಮಾಡಿ, ಅವರನ್ನು ಹಿಂದೂ ಸಮಾಜಕ್ಕೆ ಸೇರಿಸಿಕೊಂಡಿದೆ. ಆರ್ಯ ಸಮಾಜ ಅನೇಕ ವಿದ್ಯಾ ಸಂಸ್ಥೆಗಳನ್ನು ದೇಶದ ಅನೇಕ ಭಾಗಗಳಲ್ಲಿ ನಡೆಸುತ್ತಿದ್ದು, ಧರ್ಮ ಹಾಗೂ ದೇಶಭಕ್ತಿಯ ಹಿನ್ನೆಲೆಯಲ್ಲಿ ವಿದ್ಯಾಭ್ಯಾಸ ಕ್ರಮವನ್ನು ರೂಪಿಸಿದೆ. ದಯಾನಂದರು ಪರೋಕ್ಷವಾಗಿ ರಾಷ್ಟ್ರೀಯ ಚಳವಳಿಗೆ ಕಾರಣರಾಗಿದ್ದಾರೆ. ಧಾರ್ಮಿಕ ಹಾಗೂ ಸಾಮಾಜಿಕ ಸುಧಾರಣೆಗಳಿಂದಲೂ ಮತ್ತು ವಿದ್ಯೆಯನ್ನು ಬಡವರ ಬಾಗಿಲಿಗೆ ಒಯ್ಯುವುದರಿಂದಲೂ ಜನರಲ್ಲಿ ರಾಷ್ಟ್ರೀಯ ಜಾಗೃತಿಯನ್ನು ಹರಡಿದರು. ಅವರು ಸ್ವದೇಶಿಯ ಭಕ್ತರೂ ಆಗಿದ್ದರು.

# ಸ್ವಾಮಿ ವಿವೇಕಾನಂದ

ಸ್ವಾಮಿ ವಿವೇಕಾನಂದರು ಇಂಗ್ಲಿಷ್ ಶಿಕ್ಷಣ ಪಡೆದು ಪದವೀಧರರಾದ ಮೇಲೆ ತಮ್ಮ ಕಾಲದ ಯುವಕರಂತೆ ಬ್ರಹ್ಮಸಮಾಜದ ಪ್ರಭಾವಕ್ಕೊಳಗಾದರು. ದೇವರನ್ನು ಕಾಣುವ ಆಶೆ ಅವರನ್ನು ಶ್ರೀ ರಾಮಕೃಷ್ಣರತ್ತ ಕರೆದೊಯ್ದಿತು. ಶ್ರೀ ರಾಮಕೃಷ್ಣರ ಮುಖ್ಯ ಶಿಷ್ಯರಾದರು.

೧೮೮೭ ರಲ್ಲಿ ಸ್ವಾಮಿ ವಿವೇಕಾನಂದರು ರಾಮಕೃಷ್ಣ ಮಠವನ್ನು ಔಪಚಾರಿಕವಾಗಿ ಆರಂಭಿಸಿದರು. ಆಗಲೇ ನರೇಂದ್ರನು ಸ್ವಾಮಿ ವಿವೇಕಾನಂದರಾದುದು. ಅನಂತರ ಭಾರತದ ತುಂಬ ಸಂಚರಿಸಿ, ಭಾರತದಲ್ಲಿ ಪೂರ್ಣ ರಾಷ್ಟ್ರೀಯ ಐಕ್ಯತೆ ಇರುವುದನ್ನು ಗುರುತಿಸಿದರು. ಭಾರತೀಯರ ಬಡತನವನ್ನು ಕಣ್ಣಾರೆ ಕಂಡ ಅವರು ಆ ಜೀವನದಲ್ಲಿ ಪಾಲ್ಗೊಂಡರು. "ಜನಸಾಮಾನ್ಯರನ್ನು ನಿರ್ಲಕ್ಷಿಸುವುದು ರಾಷ್ಟ್ರೀಯ ಪಾಪ. ನಮ್ಮ ಪತನಕ್ಕೆ ಅದೂ ಒಂದು ಕಾರಣ" ಎಂದು ಅವರು ಹೇಳುತ್ತಿದ್ದರು.

ಚಿಕ್ಯಾಗೋದಲ್ಲಿ ವಿಶ್ವಧರ್ಮ ಸಮ್ಮೇಳನದಲ್ಲಿ ಭಾಗವಹಿಸಿದ ಇವರು ಹಿಂದೂ ಧರ್ಮದ ತಿರುಳನ್ನು ಪಾಶ್ಚಾತ್ಯರಿಗೆ ಮನವರಿಕೆ ಮಾಡಿಕೊಟ್ಟರು. ಭಾರತದ ವೇದಾಂತ ದರ್ಶನದೊಂದಿಗೆ ಪಾಶ್ಚಾತ್ಯರ ವಿಜ್ಞಾನದೃಷ್ಟಿಯು ಸಮನ್ವಯವಾಗಬೇಕೆಂಬುದು ಅವರ ಮುಖ್ಯ ಬೋಧೆಗಳಲ್ಲೊಂದು.

ಜಾತಿ ಪದ್ಧತಿಯ ನಿವಾರಣೆ ಮತ್ತು ಸ್ತ್ರೀ ಸಮಾಜ ಸುಧಾರಣೆ – ಇವುಗಳಿಗಾಗಿ ಸ್ವಾಮಿಯವರು ಸದಾ ಚಿಂತಿಸುತ್ತಿದ್ದರು. ರಾಷ್ಟ್ರೀಯ ಚಳವಳಿಗೂ ಅವರದು ವಿಶೇಷವಾದ ಕೊಡುಗೆ. 'ಎದ್ದೇಳಿ, ಎಚ್ಚರಗೊಳ್ಳಿ; ಗುರಿ ಮುಟ್ಟುವ ವರೆಗೆ ನಿಲ್ಲದಿರಿ!'—ಅವರ ಈ ಘೋಷಣೆ ರಾಷ್ಟ್ರೀಯ ಆಂದೋಲನದ ಸಂಕೇತ ಸೂಕ್ತಿಯಾಯ್ತು.

# ಶ್ರೀಮತಿ ಆನಿಬೆಸೆಂಟ್

ಐರ್ಲಂಡಿನ ಸ್ವಾತಂತ್ರ್ಯಕ್ಕಾಗಿ ಮತ್ತು ಸ್ತ್ರೀಯರ ಹಕ್ಕುಗಳಿಗಾಗಿ ಹೋರಾಟ ನಡೆಸಿದ ಆನಿಬೆಸೆಂಟ್ ೧೮೯೩ರಲ್ಲಿ ಭಾರತಕ್ಕೆ ಬಂದರು. ವಿಶ್ವ ಧರ್ಮಗಳ ಅಧ್ಯಯನ ಮಾಡಿದ ಅವರಿಗೆ ಭಾರತವ ತತ್ವಜ್ಞಾನ ಉಚ್ಚ ಮಟ್ಟದ್ದಾಗಿ ತೋರಿತು. ಭಾರತವನ್ನೇ ತಮ್ಮ ತಾಯ್ನಾಡನ್ನಾಗಿ ಸ್ವೀಕರಿಸಿ ಭಾರತದ ನೈತಿಕ ಮತ್ತು ಸಾಮಾಜಿಕ ಪುನರುತ್ಥಾನಕ್ಕಾಗಿ ತಮ್ಮ ಜೀವನದ ನಲವತ್ತು ವರುಷಗಳ ಅಮೂಲ್ಯ ಕಾಲವನ್ನು ಮೀಸಲಿರಿಸಿದರು. ಹಿಂದೂ ಧರ್ಮ ಮತ್ತು ಸಂಸ್ಕೃತಿಗಳ ಬಗೆಗೆ ಹೆಮ್ಮೆ ಮತ್ತು ಆತ್ಮಗೌರವವುಂಟು ಮಾಡಿದ ಪ್ರಖ್ಯಾತ ವನಿತೆ ಶ್ರೀಮತಿ ಬೆಸೆಂಟ್.

ಈವರೆಗೆ ವಿವರಿಸಿದ ವ್ಯಕ್ತಿಗಳು ಭಾರತದ ಪುನರುತ್ಥಾನಕ್ಕಾಗಿ ಶ್ರಮಿಸಿದವರಲ್ಲಿ ಪ್ರಮುಖರಾಗಿದ್ದಾರೆ. ಭಾರತದ ಪ್ರಾಚೀನ ಸಂಸ್ಕೃತಿ ಮತ್ತು ಪವಿತ್ರ ಗ್ರಂಥಗಳತ್ತ ಜನತೆಯ ಮನಸೆಳೆದು ರಾಷ್ಟ್ರೀಯ ಜಾಗೃತಿಯನ್ನುಂಟು ಮಾಡಿದ ಮಹಾ ನಾಯಕರಿವರು. ಇವರ ಕಾರ್ಯಗಳ ಪ್ರಭಾವದಿಂದ ಸಂಕುಚಿತ ಮನೋಭಾವ, ಮೂಢನಂಬಿಕೆ, ಆತ್ಮಾವಹೇಳನಭಾವ ಇತ್ಯಾದಿಗಳನ್ನು ತೊರೆದು ಆತ್ಮವಿಶ್ವಾಸದಿಂದ ವೈಭವಯುತ ಬಾಳುವೆ ನಡೆಸಿದ ಪ್ರಾಚೀನ ಭಾರತೀಯರ ಪೀಳಿಗೆಯವರು ತಾವೆಂಬ ಹೆಮ್ಮೆ ಭಾರತೀಯರಲ್ಲಿ ಅಂಕುರಿಸತೊಡಗಿತು. ಈ ನವಚೇತನ ಭಾರತ ಸ್ವಾತಂತ್ರ್ಯ ಸಮರಕ್ಕೆ ಹೆಚ್ಚಿನ ಪುಷ್ಟಿಯನ್ನೂ ಮೆರುಗನ್ನೂ ಕೊಟ್ಟಿತು.

# ೪ - ಭಾರತದ ರಾಷ್ಟ್ರೀಯ ಕಾಂಗ್ರೆಸ್

## ರಾಷ್ಟ್ರೀಯತೆಯ ಜಾಗೃತಿ

"ಒಂದು ಸಮಗ್ರ ಶಕ್ತಿಯಾಗಿ ರಾಷ್ಟ್ರೀಯತೆಯ ಉದಯವಾದುದು ಹತ್ತೊಂಭತ್ತನೆಯ ಶತಮಾನದ ಸಾಧನೆ" ಎಂದು ಕೆ. ಎಂ. ಪಣಿಕ್ಕರ್ ಹೇಳಿದ್ದಾರೆ. ಮೊದಲ ಸ್ವಾತಂತ್ರ್ಯ ಸಂಗ್ರಾಮ ತಾತ್ಕಾಲಿಕವಾಗಿ ಕೆಲ ಮಟ್ಟಿಗೆ ದೇಶದ ಐಕಮತ್ಯವನ್ನು ಸಾಧಿಸಿತು ನಿಜ. ಆದರೆ ಈ ಐಕಮತ್ಯ ವನ್ನು ಅಚಲವಾದ ಧ್ಯೇಯೋದ್ದೇಶದ ತಳಹದಿಯ ಮೇಲೆ ನಿರ್ಮಿಸಲಾ ಗಿದ್ದಿತೇ ಎಂಬ ವಿಚಾರ ಮಾತ್ರ ಚರ್ಚಾಸ್ಪದವಾಗಿದೆ. ಪಾಶ್ಚಾತ್ಯ ಸಂಸ್ಕೃತಿಯ ಪ್ರತಿಪಾದಕರು ಊಹಿಸಲಾಗದಂಥ ಅನೇಕ ಪರಿಣಾಮಗಳು ಇಂಗ್ಲಿಷ್ ಶಿಕ್ಷಣ ದಿಂದ ಹಾಗೂ ಪಾಶ್ಚಾತ್ಯ ಸಂಸ್ಕೃತಿಯ ಸಂಪರ್ಕದಿಂದ ಭಾರತದಲ್ಲಿ ಕಾಣ ಬಂದವು. ಭಾರತೀಯರಲ್ಲಿ ರಾಜಕೀಯ ಪ್ರಜ್ಞೆ ಬೆಳೆಯತೊಡಗಿತು. ಮುಖ್ಯ ವಾಗಿ, ಸಾಮಾಜಿಕ ಹಾಗೂ ಧಾರ್ಮಿಕ ಸಂಸ್ಥೆಗಳಾದ ಬ್ರಹ್ಮ ಸಮಾಜ, ಆರ್ಯ ಸಮಾಜ, ಶ್ರೀ ರಾಮಕೃಷ್ಣ ಆಶ್ರಮ, ಮತ್ತು ಥಿಯಸಾಫಿಕಲ್ ಸೊಸೈಟಿ ಮುಂತಾದವು ಭಾರತೀಯರಲ್ಲಿ ಭ್ರಾತೃತ್ವ, ರಾಷ್ಟ್ರೀಯತೆ, ಸ್ವಾತಂತ್ರ್ಯ, ಸಮತೆ, ದೇಶಪ್ರೇಮ ಮತ್ತು ಮಾನವೀಯ ಪ್ರೇಮ ಭಾವನೆ ಗಳನ್ನು ದೊಡ್ಡ ಪ್ರಮಾಣದಲ್ಲಿ ಪ್ರಚೋದಿಸಿದವು.

ಮಿಲ್ಟನ್, ಬರ್ಕ್, ಮಿಲ್, ಮೆಕಾಲೆ, ಸ್ಪೆನ್ಸರ್ ಮೊದಲಾದ ಪಾಶ್ಚಾತ್ಯ ವಿದ್ವಾಂಸರ ಬರೆಹಗಳಲ್ಲಿ ಕಾಣಬರುವ ಉದಾರವಾದಿ ರಾಜಕೀಯ ವಿಚಾರಗಳು ಭಾರತೀಯರಿಗೆ ಲಭ್ಯವಾದವು. ಆಧುನಿಕ ಯುರೋಪಿನಲ್ಲಿ ನಡೆದ ಕ್ರಾಂತಿಗಳಿಂದಾದ ಸಾಧನೆಗಳು ಹಾಗೂ ಬೇರೆ ಹಲವೆಡೆಗಳಲ್ಲಿ ರಾಷ್ಟ್ರೀಯ ಪ್ರಜ್ಞೆ ಗಳಿಸಿದ ಜಯ ಭಾರತೀಯರ ಮನಸ್ಸಿನಲ್ಲಿ "ಸ್ವಾತಂತ್ರ್ಯ, ರಾಷ್ಟ್ರೀಯತೆ

ಮತ್ತು ಸ್ವಯಮಾಡಳಿತಗಳ ಸತ್ಯವನ್ನು" ಮನವರಿಕೆ ಮಾಡಿಕೊಟ್ಟಿತು. ಇದರಿಂದ ಅವರಿಗೆ ಸ್ವತಂತ್ರ ಸರಕಾರವನ್ನು ಹೊಂದುವ ಅಭಿಲಾಷೆ ಪ್ರಬಲ ವಾಯಿತು. "ಇಂಗ್ಲೆಂಡಿನಲ್ಲಿದ್ದು ಮರಳಿದ ಭಾರತೀಯರಿಗೆ ತಮ್ಮ ದೇಶದಲ್ಲಿ ಕಂಡುಬರುತ್ತಿದ್ದ ಗುಲಾಮಗಿರಿಯ ವಾತಾವರಣ ಮತ್ತು ಅಸಮಾಧಾನ ಗಳಿಂದಾಗಿ ಸಂತಸದ ಮತ್ತು ಸ್ವತಂತ್ರವಾದ ಬಾಳನ್ನು ನಡೆಸುವುದು ಕಷ್ಟಕರ ವೆನಿಸಿತು. ಅವರು ಅಸಂತೃಪ್ತರೂ ಜಿಗುಪ್ಸೆಗೊಂಡವರೂ ಆಗಿದ್ದು, ಈ ಭಾವನೆಗಳು ಇತರರಿಗೂ ಹರಡಿದವು."

# ಪ್ರಾಚೀನ ಇತಿಹಾಸ - ಸಂಸ್ಕೃತಿಗಳ ಅರಿವು

ರಾಷ್ಟ್ರೀಯ ಪ್ರಜ್ಞೆಗೆ ಅವಶ್ಯವಾದ " ಭದ್ರವಾದ ಚೌಕಟ್ಟು ಹಾಗೂ ಸ್ಫೂರ್ತಿಯ ದರ್ಶನವನ್ನು ಒದಗಿಸಿದ,– ಕೆಲವೊಂದು ದೃಷ್ಟಿಯಲ್ಲಿ ಅತ್ಯಂತ ಮಹತ್ವದ ಸಂಗತಿಯೆಂದರೆ, ಭಾರತೀಯ ಇತಿಹಾಸದ ಸಂಪಾದನೆ.' ಇದು ಹತ್ತೊಂಭತ್ತನೆಯ ಶತಮಾನದ ಮಹತ್ವದ ಸಾಧನೆ. ಮುಸ್ಲಿಂ ಆಕ್ರಮಣಕ್ಕೆ ಪೂರ್ವದ ಇತಿಹಾಸದ ವಿವರ ಹೆಚ್ಚಾಗಿ ತಿಳಿದಿರಲಿಲ್ಲ. ಭಾರತವು ಅನ್ಯರಿಂದ ಆಕ್ರಮಿಸಲ್ಪಟ್ಟು ಅನ್ಯರಿಂದಲೇ ಆಳಿಸಿಕೊಳ್ಳಲು ಯೋಗ್ಯವಾದ ದೇಶವೆಂದು ಪಾಶ್ಚಾತ್ಯರು ತಿಳಿದಿದ್ದರು. ಜೋನ್ಸ್, ಕೋಲ್ ಬ್ರೂಕ್, ಹೆಗೆಲ್, ಮ್ಯಾಕ್ಸ್ ಮುಲ್ಲರ್, ಷೋಪನ್ ಹಾರ್ ಮೊದಲಾದ ಪಾಶ್ಚಾತ್ಯ ವಿದ್ವಾಂಸರು ಭಾರತೀಯ ಸಂಸ್ಕೃತಿಯ ಭಾಷೆಯಾದ ಸಂಸ್ಕೃತದ ಶ್ರೀಮಂತಿಕೆಯನ್ನು ಮತ್ತು ಸಂಸ್ಕೃತ ಭಾಷೆಯಲ್ಲಿದ್ದ ಅಮೂಲ್ಯ ಸಂಪತ್ತನ್ನು ತೋರಿಸಿಕೊಟ್ಟರು. ಪಾಶ್ಚಾತ್ಯರು ಆರಂಭಿಸಿದ ಈ ಕೆಲಸವನ್ನು ಭಾರತೀಯ ವಿದ್ವಾಂಸರು ಮುಂದುವರಿಸುತ್ತ ಭಾರತದ ಇತಿಹಾಸವನ್ನು ಪುನಶ್ಶೋಧಿಸಿ ಅದನ್ನು ಜನಸಾಮಾನ್ಯರ ಸ್ವತ್ತನ್ನಾಗಿ ಮಾಡಿದರು. ಇದರಿಂದ ಭಾರತೀಯ ಸಂಸ್ಕೃತಿ ಜಗತ್ತಿನ ಅತಿ ಪ್ರಾಚೀನ ಸಂಸ್ಕೃತಿಗಳಲ್ಲಿ ಒಂದೆಂದೂ, ವಿಶ್ವದ ಇತರ ದೇಶಗಳು ಎಚ್ಚರಗೊಳ್ಳುವ ಮುನ್ನವೆ, ಭಾರತ ತನ್ನ ಸಂಸ್ಕೃತಿ ಧಾರೆಯನ್ನು ಇತರರಿಗೆ ಎರೆದಿತ್ತೆಂದೂ ತಿಳಿವಳಿಕೆ ಮೂಡಿತು. ಇಷ್ಟು ಮಾತ್ರವಲ್ಲ, ಭಾರತೀಯರು ಸ್ವತಂತ್ರ ರಾಜ್ಯಗಳನ್ನು ಕಟ್ಟಿ, ವಿಶ್ವದ ಇತರ ಭಾಗಗಳಿಗೆ ಸಮುದ್ರಯಾನ ಮಾಡಿ ರಾಜಕೀಯ ಹಾಗೂ ವ್ಯಾಪಾರ ಸಂಬಂಧ ಬೆಳೆಸಿದ್ದರೆಂದು ಅರಿಯಲೂ ಸಾಧ್ಯವಾಯಿತು. ಭಾರತೀಯ ಸಂಸ್ಕೃತಿಯ ಈ ಶ್ರೀಮಂತಿಕೆ ಸ್ವಾಭಾವಿಕವಾಗಿ ಭಾರತೀಯರಲ್ಲಿ ಹೆಮ್ಮೆಯ ಭಾವನೆ ಅಂಕುರಿಸುವಂತೆ ಮಾಡಿತು. ತಮ್ಮ ದೇಶದ ಆಡಳಿತದಲ್ಲಿ ತಾವೂ ಪಾಲ್ಗೊಳ್ಳಬೇಕೆಂಬ ಬಯಕೆಯೂ

ಇದರಿಂದ ಮೂಡಿತು. ಅಲ್ಲದೆ, ಇದಕ್ಕಾಗಿ ಆಂದೋಳನವನ್ನು ಹೂಡುವ ಸ್ಥಿತಿಗೂ ಭಾರತೀಯರು ಬಂದರು. ಮತ್ತು ಸುಧಾರಿಸಿದ ಸಾರಿಗೆ ಸಂಪರ್ಕ, ಅಂಚೆ ಮತ್ತು ತಂತಿ ಸೌಲಭ್ಯಗಳು ದೇಶದ ವಿವಿಧ ಭಾಗಗಳ ಏಕಾಂಗಿತನ ವನ್ನು ದೂರ ಮಾಡಿ ಐಕ್ಯತೆಗೆ ದಾರಿ ಮಾಡಿ ಕೊಟ್ಟವು.

# ಕಾಂಗ್ರೆಸ್ ಸಂಸ್ಥೆಯ ಹುಟ್ಟು

ಭಾರತೀಯರಲ್ಲಿ ರಾಷ್ಟ್ರೀಯ ಜಾಗೃತಿಯೇನೋ ಉಂಟಾಯಿತು. ಆದರೆ ಕ್ರಿಯಾತ್ಮಕವೂ, ಸಂವಿಧಾನಬದ್ಧವೂ ಆದ ಚಳವಳಿಯನ್ನು ನಡೆಸಿ, ಸಂಘಟಿತ ಹೋರಾಟ ನಡೆಸುವ ಶ್ರಮದ ಕಾರ್ಯವಿನ್ನೂ ಆಗಬೇಕಿತ್ತು.

ಈ ಮಧ್ಯೆ ಲಾರ್ಡ್‌ಲಿಟ್ಟನ್ ವೈಸ್‌ರಾಯ್ ಆಗಿ ಬಂದ. ಅವನ ದಬ್ಬಾಳಿಕೆಯ ನೀತಿ ಭಾರತೀಯರಲ್ಲಿ ಅಸಮಾಧಾನವನ್ನು ಹುಟ್ಟಿಸಿತು. ಅಫ್ಘನ್ ಯುದ್ಧದಲ್ಲಿ ಭಾರತವನ್ನು ವ್ಯರ್ಥವಾಗಿ ತೊಡಗಿಸಿದ್ದು ಮತ್ತು ಪ್ರೆಸ್ ಶಾಸನದಿಂದ ಭಾರತೀಯ ಭಾಷಾ ವೃತ್ತಪತ್ರಿಕೆಗಳನ್ನು ಸಂಕಟಕ್ಕೊಳಪಡಿಸಿದ್ದು, ಭಾರತೀಯರ ಅಶಾಂತಿಯನ್ನು ಇನ್ನೂ ಹೆಚ್ಚಿಸಿತು. ಈ ದುರಾಡಳಿತವನ್ನು ಸಹಿಸದ ಹಿರಿಯ ದೇಶಭಕ್ತ ಸುರೇಂದ್ರನಾಥ ಬ್ಯಾನರ್ಜಿಯವರು ಭಾರತದಲ್ಲೆಲ್ಲಾ ಸಂಚರಿಸಿ, ಈ ಅನ್ಯಾಯದ ವಿರುದ್ಧ ಹೋರಾಡಲು ಜನರನ್ನು ಒಂದುಗೂಡಿಸುವ ಪ್ರಯತ್ನ ಮಾಡಿದರು. ಅಲ್ಲದೆ ಸಂಘಟಿತ ಹೋರಾಟ ನಡೆಸುವ ಸಲುವಾಗಿ ೧೮೭೬ ರಲ್ಲಿ "ಇಂಡಿಯನ್ ಅಸೋಸಿಯೇಶನ್" ಎಂಬ ಸಂಸ್ಥೆಯನ್ನು ಕಲ್ಕತ್ತೆಯಲ್ಲಿ ಸ್ಥಾಪಿಸಿದರು. 'ಇಂಡಿಯನ್ ಅಸೋಸಿಯೇಶನ್' ಸಂಸ್ಥೆ ಕಲ್ಕತ್ತೆಯಲ್ಲಿ ತನ್ನ ಪ್ರಥಮ 'ರಾಷ್ಟ್ರೀಯ ಅಧಿವೇಶನ'ವನ್ನು ೧೮೮೩ ರಲ್ಲಿ ಸಂಘಟಿಸಿತು. ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಮೂಲಪೀಠಿಕೆಯಿದು.

ಭಾರತೀಯರಲ್ಲಿ ಸಹಾನುಭೂತಿಯುಳ್ಳ ಕೆಲವು ಆಂಗ್ಲ ಅಧಿಕಾರಿಗಳೂ ಸಹ ದೇಶದಲ್ಲಿ ನೆಲೆಗೊಂಡಿದ್ದ ಅಸಮಾಧಾನವನ್ನು ಯೋಗ್ಯರೀತಿಯಲ್ಲಿ ಪರಿಹರಿಸುವಂತೆ ಮಾಡಲು ಒಂದು ಸಂಸ್ಥೆಯ ಅವಶ್ಯಕತೆಯನ್ನು ಕಂಡರು. ಇಂಥ ಅಧಿಕಾರಿಗಳಲ್ಲಿ ಮುಖ್ಯರಾದವರು ಎ. ಒ. ಹ್ಯೂಮ್. ವಿದ್ಯಾವಂತ ಭಾರತೀ

ಯರಲ್ಲಿ ಬಲವಾಗಿದ್ದ ಅಸಂತುಷ್ಟತೆಯನ್ನು ಅದೇ ರೀತಿಯಲ್ಲಿ ಬೆಳೆಯಲು ಬಿಟ್ಟಲ್ಲಿ ಅಪಾಯಕಾರಿಯಾಗಬಹುದೆಂದು ಇವರು ಮನಗಂಡರು. "ನಮ್ಮ ಕೃತಿಗಳಿಂದಲೇ ಸೃಷ್ಟಿಯಾದ ಭಾರಿ ಪ್ರಮಾಣದ ಮತ್ತು ಬೆಳೆಯುತ್ತಿರುವ ಚಳವಳಿಗಳು ನುಸುಳಿ ಹೋಗದಂತೆ ಮಾಡಲು ಒಂದು ಭದ್ರವಾದ ಪೆಟ್ಟಿಗೆ ತುರ್ತಾಗಿ ಬೇಕಾಗಿತ್ತು. ನಮ್ಮ ರಾಷ್ಟ್ರೀಯ ಕಾಂಗ್ರೆಸ್ ಸಂಘಟನೆಗಿಂತ ಭದ್ರವಾದ ಪೆಟ್ಟಿಗೆಯನ್ನು ಯೋಚಿಸುವುದು ಸಾಧ್ಯವಿರಲಿಲ್ಲ" ಎಂದು ಹ್ಯೂಮ್ ಕಾಂಗ್ರೆಸ್ ಸಂಸ್ಥೆಯನ್ನು ಕುರಿತು ಹೇಳಿದ್ದಾರೆ. ಹೀಗೆ ಜನರು ಒಂದೆಡೆ ಸೇರಿ ಆಡಳಿತವನ್ನು ಕುರಿತು ಚರ್ಚೆ ನಡೆಸಿ, ಆಡಳಿತದ ಲೋಪದೋಷಗಳನ್ನು ತೋರಿಸಿ, ಜವಾಬ್ದಾರಿಯುತವಾದ ವಿರೋಧ ಪಕ್ಷದಂತೆ ವರ್ತಿಸಿದಲ್ಲಿ ಸರಕಾರಕ್ಕೂ ತನ್ನ ಲೋಪದೋಷಗಳನ್ನು ಸರಿಪಡಿಸಿಕೊಳ್ಳಲು ಸಾಧ್ಯವಾಗುತ್ತದೆಂಬ ಆಶಯ ಅವರದಾಗಿತ್ತು. ೧೮೮೪ರಲ್ಲಿ ಸುರೇಂದ್ರನಾಥ ಬ್ಯಾನರ್ಜಿಯವರು ಸಂಘಟಿಸಿದ್ದ 'ರಾಷ್ಟ್ರೀಯಅಧಿವೇಶನ'ದಲ್ಲಿ ಅವರೊಂದಿಗೆ ಸಹಕರಿಸಿದ್ದರು. ರಾಷ್ಟ್ರೀಯ ಸಂಘಟನೆಯ ಈ ಉದ್ದೇಶ ಸಾಧನೆಗಾಗಿ ಒಂದು ಅಖಿಲಭಾರತ ಸಂಸ್ಥೆಯನ್ನು ಕಟ್ಟಲು ಹ್ಯೂಮ್ ತರುಣರಿಗೆ ಕರೆ ನೀಡಿದರು. ಅವರ ಶ್ರದ್ಧೆ ಹಾಗೂ ಶ್ರಮದ ಫಲವಾಗಿ "ಇಂಡಿಯನ್ ನ್ಯಾಷನಲ್ ಕಾಂಗ್ರೆಸ್" ೧೮೮೫ರಲ್ಲಿ ಜನ್ಮತಳೆಯಿತು. ಈ ಸಂಸ್ಥೆ ೧೮೮೫ನೆಯ ಡಿಸೆಂಬರ್‌ನಲ್ಲಿ ಪುಣೆಯಲ್ಲಿ ಸಮ್ಮೇಳನ ನಡೆಸಲು ಉದ್ದೇಶಿಸಿತು. ಆದರೆ ಆಗ ಪುಣೆಯಲ್ಲಿ ಕಾಲರಾ ಸಾಂಕ್ರಾಮಿಕರೋಗ ಆರಂಭವಾದುದರಿಂದ, ೧೮೮೫ನೆಯ ಡಿಸೆಂಬರ್ ೨೮ರಂದು ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ಸಿನ ಮೊದಲ ಅಧಿವೇಶನವು ಮುಂಬಯಿಯಲ್ಲಿ ನಡೆಯಿತು. ಉಮೇಶ ಚಂದ್ರ ಬ್ಯಾನರ್ಜಿಯವರು ಈ ಐತಿಹಾಸಿಕ ಅಧಿವೇಶನದ ಅಧ್ಯಕ್ಷತೆ ವಹಿಸಿದ್ದರು.

# ನವಯುಗಾರಂಭ

"ಇಂಡಿಯನ್ ನ್ಯಾಷನಲ್ ಕಾಂಗ್ರೆಸ್" ಸ್ಥಾಪನೆಯೊಂದಿಗೆ ಭಾರತದ ಇತಿಹಾಸದಲ್ಲಿ ಒಂದು ನವಯುಗ ಪ್ರಾರಂಭವಾಯಿತು. ಈ ಸಂಸ್ಥೆಯ ನೇತೃತ್ವದಲ್ಲಿ ಆ ಸ್ಮರಣೀಯ ದಿನದಂದು ಭಾರತವು ಔಪಚಾರಿಕವಾಗಿ ಒಂದು ಸಂಘರ್ಷವನ್ನು ಆರಂಭಿಸಿತು. ದಿನದಿಂದ ದಿನಕ್ಕೆ ತೀವ್ರವಾಗುತ್ತ ನಡೆದ ಈ ಸಂಘರ್ಷವು-ಕಾಲವು ಪಕ್ವವಾದಾಗ-ಒಂದು ಬೃಹತ್ ಚಳವಳಿಯಾಗಿ ಬೆಳೆದು ಸ್ವರಾಜ್ಯ ಅಥವಾ ಪೂರ್ಣ ಜವಾಬ್ದಾರಿ ಸರಕಾರಕ್ಕಾಗಿ ಅದು ಹೋರಾಟದ ಸ್ವರೂಪವನ್ನು ತಳೆಯಿತು. ಸ್ವರಾಜ್ಯ ಸಂಪಾದನೆಗಾಗಿ ಶ್ರಮಿಸುವುದು, ದೇಶದ ವಿವಿಧ ಭಾಗಗಳಲ್ಲಿದ್ದು ದೇಶದ ಏಳಿಗೆಗಾಗಿ ದುಡಿಯುವ ಕಾರ್ಯಕರ್ತರ ಪರಿಚಯವನ್ನು ಮಾಡಿಕೊಳ್ಳುವುದು, ಲಿಂಗ, ವರ್ಣ, ಜಾತಿಗಳ ಬೇಧವಿಲ್ಲದೆ ರಾಷ್ಟ್ರದ ಐಕ್ಯತೆಯನ್ನು ಬೆಳೆಸುವುದು, ದೇಶದ ಸಾಮಾಜಿಕ ಮತ್ತು ಧಾರ್ಮಿಕ ಸುಧಾರಣೆಗಳಲ್ಲಿ ಜನತೆಯ ವಿಶ್ವಾಸ ಹಾಗೂ ಸಹಕಾರಗಳನ್ನು ದೊರಕಿಸಿಕೊಳ್ಳುವುದು,-ಇವು ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಧ್ಯೇಯಗಳಾಗಿದ್ದವು.

ಕಾಂಗ್ರೆಸ್ ಚಳವಳಿಯ ಇತಿಹಾಸದಲ್ಲಿ ಎರಡು ನಿರ್ದಿಷ್ಟ ಹಂತಗಳಿವೆ. ಮೊದಲನೆಯದು ಮಿತಗಾಮಿ ತೀವ್ರಗಾಮಿಗಳ ಚಳವಳಿ: ೧೮೮೫ರಿಂದ ೧೯೧೯ರ ವರೆಗೆ; ಎರಡನೆಯದು-೧೯೧೯ ರಿಂದೀಚೆಗೆ. ಈ ಎರಡನೆಯ ಹಂತವನ್ನು 'ಗಾಂಧಿಯುಗ'ವೆಂದು ಕರೆಯಬಹುದಾಗಿದೆ.

# ಮಿತಗಾಮಿಗಳ ಸುಧಾರಣಾ ಚಳವಳಿ

ಈ ಚಳವಳಿಯ ಮೊದಲ ಹಂತ ದೇಶಭಕ್ತರಾದ ದಾದಾಭಾಯಿ ನೌರೋಜಿ, ಸುರೇಂದ್ರನಾಥ ಬ್ಯಾನರ್ಜಿ, ಫಿರೋಜ್‌ಷಾ ಮೆಹತಾ, ಗೋಪಾಲ ಕೃಷ್ಣ ಗೋಖಲೆ, ಬಾಲ ಗಂಗಾಧರ ತಿಲಕ್, ಅರವಿಂದಘೋಷ್ ಮತ್ತು ಲಾಲಾ ಲಜಪತ್‌ರಾಯ್ ಇವರುಗಳ ವ್ಯಕ್ತಿತ್ವದಿಂದ ಆವೃತಗೊಂಡಿದೆ. ಇವರುಗಳು ತಮ್ಮ ಶ್ರೀಮಂತಿಕೆಯನ್ನು ಬದಿಗೊತ್ತಿ, ದೇಶದ ಕಲ್ಯಾಣಕ್ಕಾಗಿ ಅನೇಕ ಕಷ್ಟನಷ್ಟಗಳನ್ನು ಅನುಭವಿಸಿದರು. ಇವರು ಮನಸ್ಸುಮಾಡಿದ್ದಲ್ಲಿ ಆಂಗ್ಲರ ಆಡಳಿತದಲ್ಲಿ ಉಚ್ಚ ಹುದ್ದೆಯ ಸುಖವನ್ನು ಸವಿಯಬಹುದಿತ್ತು. ಆದರೆ ಅವರು ಭೋಗಜೀವನಕ್ಕಿಂತ ತ್ಯಾಗಜೀವನವೇ ಲೇಸೆಂದು ಅದನ್ನು ಆಯ್ದುಕೊಂಡು ಮಾತೃಭೂಮಿಗೆ ತಮ್ಮ ಶಕ್ತಿಮೀರಿ ಸೇವೆಮಾಡಿ ಎಲ್ಲರ ಪ್ರಶಂಸೆ ಮತ್ತು ಗೌರವಗಳಿಗೆ ಪಾತ್ರರಾಗಿದ್ದಾರೆ.

ಜನತೆಯ ಕಲ್ಯಾಣ ಕಾಂಗ್ರೆಸ್ಸಿನ ಮುಖ್ಯೋದ್ದೇಶಗಳಲ್ಲಿ ಒಂದಾಗಿತ್ತು. ಇದರ ಸಾಧನೆಗಾಗಿ ಕಾಂಗ್ರೆಸ್ ಪ್ರತಿವರ್ಷವೂ ಅಧಿವೇಶನ ನಡೆಸಿ, ಆಡಳಿತ ನೀತಿಯನ್ನು ವಿಮರ್ಶಿಸಿ, ಆಡಳಿತ ದೋಷಗಳ ನಿವಾರಣೆಗಾಗಿ ಕೆಲವು ಸುಧಾರಣೆಗಳನ್ನು ತರಬೇಕೆಂದು ಕೇಳಿ, ತನ್ನ ಬೇಡಿಕೆಗಳನ್ನು ಸರಕಾರದ ಮುಂದಿಟ್ಟು, ನಿಜವಾಗಿಯೂ ವಿರೋಧ ಪಕ್ಷದಂತೆ ವರ್ತಿಸುತ್ತಿತ್ತು. ಕಾಂಗ್ರೆಸ್ಸಿನ ಮೊದ ಮೊದಲ ನಾಯಕರು ಮಧ್ಯಮಮಾರ್ಗಗಾಮಿಗಳಾಗಿದ್ದರು. ಆಂಗ್ಲರಿಗೆ ನ್ಯಾಯದ ವಿಷಯದಲ್ಲಿ ತೀವ್ರ ಪರಿಜ್ಞಾನವಿದೆಯೆಂದು ಅವರು ನಂಬಿದ್ದರು. ಇಂಗ್ಲೆಂಡಿನ ರಾಣಿ ಭಾರತದ ನೇರ ಆಡಳಿತವನ್ನು ವಹಿಸಿಕೊಂಡ ಮೇಲೆ ನಿಷ್ಪಕ್ಷಪಾತವಾದ ಆಡಳಿತವನ್ನು ನಡೆಸುವರೆಂದು ಅವರ ಭಾವನೆ. ಆದ್ದರಿಂದ ಹಿಂಸಾ ಮಾರ್ಗವನ್ನು ಅನುಸರಿಸದೆ ಶಾಂತವೂ,

ಸಂವಿಧಾನಾತ್ಮಕವೂ ಆದ ಚಳವಳಿಯಿಂದ ತಮ್ಮ ಕನಿಷ್ಠ ಬೇಡಿಕೆಗಳನ್ನು ಈಡೇರಿಸಿಕೊಳ್ಳಬಹುದೆಂದು ಅವರು ತಿಳಿದಿದ್ದರು. ಈ ಪುಣ್ಯ ಭೂಮಿಗೆ ತಮ್ಮ ಜೀವನವನ್ನು ಮೀಸಲಾಗಿಟ್ಟ ಕೆಲವು ಮಿತವಾದಿ ತೀವ್ರಗಾಮಿಗಳ ಜೀವನ ವನ್ನು ಸ್ಮರಿಸುವುದು ಅವಶ್ಯಕ.

# ದಾದಾಭಾಯಿ ನೌರೋಜಿ

ಭಾರತದ ರಾಜಕೀಯ ಸ್ವಾತಂತ್ರ್ಯಕ್ಕಾಗಿ ೫೦ ವರ್ಷಗಳ ಕಾಲ ಇಂಗ್ಲೆಂಡಿನಲ್ಲಿ ಹೋರಾಡಿ ನಿವೃತ್ತ ಅಧಿಕಾರಿಯಂತೆ ಸ್ವದೇಶಕ್ಕೆ ಮರಳಿದವರು ' ಭಾರತದ ವೃದ್ಧ ಪಿತಾಮಹ '—ದಾದಾಭಾಯಿ ನೌರೋಜಿ.

ದಾದಾಭಾಯಿಯವರು ಅನೇಕ ಕ್ಷೇತ್ರಗಳಲ್ಲಿ ಮೊದಲಿಗರಾಗಿದ್ದರು. ಭಾರತದ ಪ್ರಥಮ ಗಣಿತ ಪ್ರಾಧ್ಯಾಪಕರಾಗಿದ್ದ ಅವರು ಭಾರತೀಯರ ಸಾಮಾಜಿಕ, ಬೌದ್ಧಿಕ, ರಾಜಕೀಯ ಉದ್ಧಾರಕ್ಕಾಗಿ ಅನೇಕ ಸಂಸ್ಥೆಗಳನ್ನು ಸ್ಥಾಪಿಸಿದವರಲ್ಲಿ ಮೊದಲಿಗರು. ಬ್ರಿಟನ್ನಿನ ಪಾರ್ಲಿಮೆಂಟಿನಲ್ಲಿ ಸದಸ್ಯತ್ವ ಪಡೆದ ಮೊದಲ ಭಾರತದ ಪ್ರಜೆ ಅವರು. ಅಲ್ಲದೆ ಕಾಗ್ರೆಸ್ಸಿನ ವೇದಿಕೆಯಿಂದ ಭಾರತಕ್ಕೆ ' ಸ್ವರಾಜ್ಯ ' ಕೊಡಬೇಕೆಂದು ವಾದಿಸಿದವರಲ್ಲಿ ಅವರೇ ಮೊದಲಿಗರು !

ಭಾರತದ ವ್ಯಾಪಾರ ಕಂಪನಿಯೊಂದು ಇಂಗ್ಲೆಂಡಿನಲ್ಲಿ ಶಾಖೆ ಸ್ಥಾಪಿಸಿದಾಗ ಅವರು ತಮ್ಮ ಪ್ರಾಧ್ಯಾಪಕ ಹುದ್ದೆಯನ್ನು ತ್ಯಜಿಸಿ, ಆ ಕಂಪನಿಯ ಪ್ರತಿನಿಧಿಯಾಗಿ ಇಂಗ್ಲೆಂಡಿಗೆ ಹೋದರು. ಆದರೆ ಇಂಗ್ಲೆಂಡು ಮತ್ತು ಭಾರತದ ನಡುವೆ ನಿಕಟ ಸಂಬಂಧವನ್ನು ಸ್ಥಾಪಿಸುವುದೇ ಅವರ ಮುಖ್ಯ ಗುರಿಯಾಗಿತ್ತು.

ಬ್ರಿಟಿಷ್ ಜನತೆಯಲ್ಲಿ ಭಾರತದ ಮತ್ತು ಭಾರತೀಯರ ವಿಚಾರವಾಗಿ ಇದ್ದ ಹಲವು ತಪ್ಪು ಭಾವನೆಗಳನ್ನು ದೂರಮಾಡಿ ಒಳ್ಳೆಯ ಸಂಬಂಧವನ್ನು ತರಲು ಅವರು, 'ಲಂಡನ್ ಇಂಡಿಯನ್ ಸೊಸೈಟಿ'ಯನ್ನು ಸ್ಥಾಪಿಸಿದರು. ಕೆಲಕಾಲದನಂತರ 'ಈಸ್ಟ್ ಇಂಡಿಯಾ ಅಸೋಸಿಯೇಷನ್' ಆರಂಭಿಸಿದರು.

ತಮ್ಮ ಭಾಷಣ ಹಾಗೂ ಲೇಖನಗಳಿಂದ ಭಾರತದ ಬಗ್ಗೆ ಇಂಗ್ಲೆಂಡಿನಲ್ಲಿ ಒಳ್ಳೆಯ ಅಭಿಪ್ರಾಯವನ್ನು ಬೆಳೆಸಿದರು. ನೌರೋಜಿ ಭಾರತಕ್ಕೆ ಮರಳಿದ ಮೇಲೆ ಕಾಂಗ್ರೆಸ್ಸಿನ ಪ್ರಮುಖ ಆಧಾರಸ್ತಂಭವೇ ಆಗಿದ್ದರು. ಅವರನ್ನು ಕಾಂಗ್ರೆಸ್ಸಿನ ಮಿತವಾದಿ ತೀವ್ರಗಾಮಿಗಳಿಬ್ಬರೂ ಗೌರವದಿಂದ ಕಾಣು ತ್ತಿದ್ದರು. ಅವರು ೧೮೮೬, ೧೮೯೩ ಮತ್ತು ೧೯೦೬ರಲ್ಲಿ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದರು.

ಕಾಲಕ್ರಮದಲ್ಲಿ ಅವರಿಗೆ ಬ್ರಿಟಿಷರ ಮೇಲಿದ್ದ ವಿಶ್ವಾಸ ಕಾಣೆ ಯಾಯಿತು. ಆಗ ಅವರ ಆಡಳಿತವನ್ನು ಕಟುವಾಗಿ ಟೀಕಿಸಲು ಎಷ್ಟೂ ಹಿಂಜರಿಯಲಿಲ್ಲ. ಒಮ್ಮೆ ಅವರು ಈ ರೀತಿ ಹೇಳಿದರು : "ನಿಮ್ಮ ಉಪಕಾರ, ಅನುಗ್ರಹಗಳು ನಮಗೆ ಬೇಕಿಲ್ಲ. ನಮಗೆ ಬೇಕಾಗಿರುವುದು ನ್ಯಾಯಮಾತ್ರ. ಬ್ರಿಟಿಷ್ ನಾಗರಿಕರಾಗಿ ನಮಗೆ ಸಿಗಬೇಕಾದ ಹಕ್ಕುಗಳನ್ನು ಕಂತುಗಳಲ್ಲಿ ಕೇಳುವುದಕ್ಕಿಂತ, ಇಡಿಯ ಬೇಡಿಕೆಯನ್ನು ಒಂದೇ ಶಬ್ದದಲ್ಲಿ ಕೇಳುತ್ತೇವೆ. ನಮಗೆ 'ಸ್ವರಾಜ್ಯ' ಅಥವಾ ಸ್ವಯಂ ಆಡಳಿತಬೇಕು. ಇದು ಇಂಗ್ಲೆಂಡ್ ನಲ್ಲಿ ಅಥವಾ ಆಂಗ್ಲ ವಸಾಹತುಗಳಲ್ಲಿ ಇರುವ ಆಡಳಿತ ಸ್ವರೂಪದ್ದಿರಬೇಕು." ನೌರೋಜಿಯವರಿಂದಲೇ 'ಸ್ವರಾಜ್ಯ' ಪದವು ಭಾರತದ ರಾಷ್ಟ್ರೀಯ ಚಳವಳಿಯ ಸಮರ ಘೋಷದಲ್ಲಿ ಸೇರಿದ್ದು.

ಇಂಗ್ಲೆಂಡು ಭಾರತದ ಸಂಪತ್ತನ್ನು ಹೇಗೆ ದೋಚುತ್ತಿದೆ ಎಂಬುದನ್ನು ಇಂಗ್ಲೆಂಡಿನಲ್ಲಿದ್ದಾಗ ಇವರು ಕಂಡುಕೊಂಡಿದ್ದರು. ಈ ವಿಚಾರದ ಅರಿವನ್ನು ಭಾರತೀಯರಿಗೆ ಉಂಟುಮಾಡಿದವರು ದಾದಾಭಾಯಿಯವರು. "**ಪಾವರ್ಟಿ ಅಂಡ್ ಅನ್-ಬ್ರಿಟಿಷ್ ರೂಲ್ ಇನ್ ಇಂಡಿಯಾ**" ಎಂಬ ತಮ್ಮ ಗ್ರಂಥದಲ್ಲಿ, ಪ್ರತಿಯೊಬ್ಬ ಭಾರತೀಯ ಪ್ರಜೆಯ ಸರಾಸರಿ ಆದಾಯ ವರ್ಷಕ್ಕೆ ಇಪ್ಪತ್ತು ರೂಪಾಯಿಗಳಿಗೆ ಮೀರುವುದಿಲ್ಲವೆಂಬುದನ್ನು ತೋರಿಸಿ, ಬ್ರಿಟಿಷ್ ಸರಕಾರದ ಕಣ್ಣು ತೆರೆಯಿಸಲು ಯತ್ನಿಸಿದರು.

ಹೀಗೆ ಭಾರತದ ಹಿತಕ್ಕಾಗಿ ಅವಿಶ್ರಾಂತವಾಗಿ ಹೋರಾಡಿ, ತಮ್ಮ ಜೀವನವನ್ನು ಅದಕ್ಕಾಗಿ ಸವೆಸಿದ ಅಪಾರ ದೇಶಪ್ರೇಮಿ ದಾದಾಭಾಯಿ ನೌರೋಜಿ. ವೃದ್ಧರಾದರೂ ತಮ್ಮ ಹೃದಯದಲ್ಲಿ ಯುವಕನ ಕೆಚ್ಚನ್ನು ಹೊಂದಿದ್ದ ಅಗ್ರಗಣ್ಯ ದೇಶಭಕ್ತರು ಅವರು !

# ಗೋಪಾಲ ಕೃಷ್ಣ ಗೋಖಲೆ

ಭಾರತದ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಅತ್ಯಲ್ಪ ಕಾಲ ಜೀವಿಸಿದ್ದವರೆಂದರೆ ಗೋಪಾಲ ಕೃಷ್ಣ ಗೋಖಲೆಯುವರು. ಶ್ರೇಷ್ಠ ರಾಜನೀತಿಜ್ಞರಾದ ಅವರು ಉಚ್ಚ ಮಟ್ಟದ ದೇಶಭಕ್ತರೂ, ಶಿಸ್ತಿಗಾರರೂ ಆಗಿದ್ದರು. ಮಿತವಾದಿಗಳಾದ ಅವರು ಹಿಂಸಾ ಮಾರ್ಗದ ಚಳವಳಿಯನ್ನು ವಿರೋಧಿಸುತ್ತಿದ್ದರು. "ಇಂದೇ ಸರಕಾರವನ್ನು ಸೋಲಿಸುವುದು ನನಗೆ ಸಾಧ್ಯವಾದರೂ ಅದನ್ನು ಮಾಡಲು ನಾನು ಇಷ್ಟಪಡುವುದಿಲ್ಲ" ಎಂದು ಅವರು ಒಮ್ಮೆ ಹೇಳಿದ್ದರು. ದೇಶದ ಭದ್ರತೆಯ ದೃಷ್ಟಿಯಿಂದ ಸರಕಾರಕ್ಕೆ ನೈತಿಕ ಅಧಿಕಾರವಿರುವುದು ಪರಮ ಮಹತ್ವದ್ದೆಂದು ಅವರು ಭಾವಿಸಿದ್ದರು. ಅವರ ನಾಯಕತ್ವದಲ್ಲಿ ಕಾಂಗ್ರೆಸ್ ಎಂದೂ ಹಿಂಸಾಚರಣೆಗಳನ್ನು ಮಾನ್ಯ ಮಾಡಲಿಲ್ಲ. ಅವರ ಈ ಧೋರಣೆ ಅಂದಿನ ತೀವ್ರಗಾಮಿಗಳನ್ನು ಅಸಮಾಧಾನಗೊಳಿಸಿತು. ಅವರು ಗೋಖಲೆಯುವರನ್ನು ಕಟುವಾಗಿ ಟೀಕಿಸಿದರು. ಈ ಯಾವುದಕ್ಕೂ ಮಣಿಯದೆ ಗೋಖಲೆಯುವರು ನಿರ್ದಿಷ್ಟ ಮಟ್ಟದಿಂದ ಕೆಳಗಿಳಿಯಲಿಲ್ಲ. ಗೋಖಲೆಯುವರ ಮಾನಸಿಕ ಹಾಗೂ ಹಾರ್ದಿಕ ಗುಣಗಳು ಗಾಂಧೀಜಿಯುವರ ಮೆಚ್ಚುಗೆಗೆ ಪಾತ್ರವಾಗಿದ್ದವು. ಗೋಖಲೆಯುವರನ್ನು ಅವರು "ತಮ್ಮ ರಾಜಕೀಯ ಗುರು" ಎಂದು ಕರೆದಿದ್ದಾರೆ. ಗಾಂಧೀಜಿಯುವರಿಗೆ ರಾಜಕೀಯ ದೀಕ್ಷೆ ಕೊಟ್ಟವರು ಇವರೇ.

"ಭಾರತದ ಶಿರೋಮಣಿ, ಮಹಾರಾಷ್ಟ್ರದ ಅಮೂಲ್ಯಾಭರಣ, ಕಾರ್ಯಕರ್ತರಲ್ಲಿ ರಾಜನಂಥವರು!" — ಎಂದು ತಿಲಕರು ಅವರನ್ನು ವರ್ಣಿಸಿದ್ದಾರೆ. ಗಾಂಧೀಜಿಯುವರಿಗೆ "ಗೋಖಲೆಯುವರು ಗಂಗೆಯಂತೆ ಪವಿತ್ರರು!" ಅವರ ಗೌರವಕ್ಕೆಂದು ರಾಷ್ಟ್ರದ ವಿವಿಧ ಭಾಗಗಳಲ್ಲಿ ಅವರ ಹೆಸರಿನಲ್ಲಿ ಅನೇಕ ಸಂಸ್ಥೆಗಳು ಸ್ಥಾಪಿತವಾಗಿ ಇಂದಿಗೂ ಸೇವಾ ಕಾರ್ಯಗಳನ್ನು ನಡೆಸುತ್ತಿವೆ.

# ಲೋಕಮಾನ್ಯ ತಿಲಕರು

ಆಧುನಿಕ ಭಾರತದ ರಾಜಕೀಯ ಧುರಂಧರರಲ್ಲಿ ಬಾಲ ಗಂಗಾಧರ ತಿಲಕರಷ್ಟು ಭಾವೋತ್ಪಾದಕ ಹಾಗೂ ವೈಶಿಷ್ಟ್ಯಸೂಚಕ ವ್ಯಕ್ತಿತ್ವವುಳ್ಳ ಬೇರಾವ ವ್ಯಕ್ತಿಯೂ ಆಗ ಇರಲಿಲ್ಲ. ಭಾರತದ ಜನತೆಯಿತ್ತ 'ಲೋಕಮಾನ್ಯ'ರೆಂಬ ಬಿರುದು ಅವರಿಗೆ ಸಾರ್ಥಕವಾದುದು. ಅವರು ತಮ್ಮ ೬೪ ವರ್ಷಗಳ ಜೀವಿತ ಕಾಲದಲ್ಲಿ ದೇಶಭಕ್ತ, ರಾಜಕಾರಣಿ, ಶಿಕ್ಷಣ ಶಾಸ್ತ್ರಜ್ಞ, ವಿದ್ವಾಂಸ, ಮತ್ತು ದಾರ್ಶನಿಕ ಎಂದು ಮುಂತಾಗಿ ಭಾರತವಲ್ಲಿಯೇ ಅಲ್ಲದೆ ವಿಶ್ವದ ನಾನಾ ಭಾಗಗಳಲ್ಲಿ ಪ್ರಸಿದ್ಧಿ ಪಡೆದಿದ್ದರು.

ಹುಟ್ಟಿನಿಂದಲೇ ತಿಲಕರು ಹೋರಾಟಗಾರರಾಗಿದ್ದರು. ತಾವು ಹಿಡಿದ ಕೆಲಸವನ್ನು ಮಾಡಿಯೇ ತೀರಬೇಕೆಂಬ ಛಲ ಅವರಲ್ಲಿತ್ತು. ಅವರಿಗೆ ಗುರಿಯೇ ಪ್ರಧಾನವಾಗಿತ್ತು. ಅದರ ಸಾಧನೆಯ ಮಾರ್ಗ ಗೌಣ. ತೀವ್ರಗಾಮಿ ಪಕ್ಷದ ನಾಯಕರಾಗಿದ್ದ ಇವರಿಗೆ ಆಂಗ್ಲರ ನ್ಯಾಯಪ್ರಜ್ಞೆಯಲ್ಲಿ ನಂಬಿಕೆ ಇರಲಿಲ್ಲ. ತಮ್ಮ ಪತ್ರಿಕೆ 'ಕೇಸರಿ'ಯಲ್ಲಿ ಸರಕಾರದ ವಿರುದ್ಧ ಪ್ರಚೋದನಾತ್ಮಕ ಉಗ್ರ ಲೇಖನಗಳನ್ನು ಬರೆಯುತ್ತಿದ್ದರು. ಬಂಗಾಳದ ವಿಭಜನೆಯ ವಿರುದ್ಧವಾದ ಅವರ ಭಾಷಣ ಹಾಗೂ ಬರಹಗಳು ರಾಷ್ಟ್ರವನ್ನು ಎಚ್ಚರಗೊಳಿಸುವಲ್ಲಿ ತುಂಬ ಯಶಸ್ವಿಯಾದವು. "ಸ್ವರಾಜ್ಯವು ನನ್ನ ಜನ್ಮಸಿದ್ಧ ಹಕ್ಕು. ನಾನು ಅದನ್ನು ಪಡೆದೇ ತೀರುವೆ!"—ಎಂಬ ಅವರ ಪ್ರಖ್ಯಾತ ಘೋಷಣೆ ೧೯೦೬ ರಿಂದ ಕಾಂಗ್ರೆಸ್ಸಿನ ಘೋಷಣೆಯೂ ಆಯಿತು.

ಆಂಗ್ಲರನ್ನು ಭಾರತದಿಂದ ತೊಲಗಿಸಲು ಯಾವ ಮಾರ್ಗವನ್ನೂ ಅನುಸರಿಸಲು ಅವರು ಸಿದ್ಧರಿದ್ದರು. ಜನರಲ್ಲಿ ಉಜ್ವಲ ದೇಶಾಭಿಮಾನವನ್ನು

ಸೃಷ್ಟಿಸಲು ಶಿವಾಜಿ ಜಯಂತಿ, ಗಣಪತಿ ಹಬ್ಬಗಳನ್ನು ನಾಡ ಹಬ್ಬಗಳನ್ನಾಗಿ ಮಾಡಿದರು. ಆದರೆ ಅವರಿಗೆ ಪಾಶ್ಚಾತ್ಯ ದೇಶಗಳ ಅಥವಾ ಸಂಸ್ಕೃತಿಗಳ ಮೇಲೆ ದ್ವೇಷವಿರಲಿಲ್ಲ. ಪಾಶ್ಚಾತ್ಯ ನಾಗರಿಕತೆಯ ಹೊರ ಮೆರುಗಿಗೆ ಮೋಹಿಸದೆ ಆ ದೇಶಗಳ ಘನತೆಗೆ ಕಾರಣವಾದ ಸದ್ಗುಣಗಳನ್ನು ಮೈಗೂಡಿಸಿ ಕೊಳ್ಳಲು ಭಾರತೀಯರಿಗೆ ಅವರು ಮನವಿ ಮಾಡಿಕೊಳ್ಳುತ್ತಿದ್ದರು. ಭಾರ ತೀಯರು ತಮ್ಮ ಪ್ರಾಚೀನ ಇತಿಹಾಸ, ಸಂಸ್ಕೃತಿಗಳ ಬಗ್ಗೆ ಹೆಮ್ಮೆ ಪಡದಿದ್ದರೆ ಅವರು ಭವಿಷ್ಯತ್ತಿನ ಬಗ್ಗೆ ಯಾವ ಆಶೆಯನ್ನೂ ಇಟ್ಟುಕೊಳ್ಳಲಾರರೆಂದು ತಿಲಕರು ಎಚ್ಚರಿಸುತ್ತಿದ್ದರು.

ಅವರ ಶ್ರಮದ ಫಲವಾಗಿ ರಾಷ್ಟ್ರೀಯ ಚಳವಳಿ ಜನತಾ ಚಳವಳಿ ಯಾಯಿತು. ಮಹಾರಾಷ್ಟ್ರದಲ್ಲಿ ಕ್ರಾಂತಿಕಾರಿ ಚಟುವಟಿಕೆಗಳು ದಿನೇ ದಿನೇ ಬೆಳೆಯುತ್ತಿದ್ದವು. ಇದಕ್ಕೆ ತಿಲಕರ ಭಾಷಣ ಹಾಗೂ ಬರೆವಣಿಗೆಗಳು ಕಾರಣ ವೆಂದು ಸರಕಾರ ನಿರ್ಧರಿಸಿ, ಅವರ ಮೇಲೆ ಮೊಕದ್ದಮೆ ಹೂಡಿ, ಅವರಿಗೆ ದೀರ್ಘಕಾಲದ ಕಠಿಣ ಶಿಕ್ಷೆ ವಿಧಿಸಿತು. ೧೯೦೮ರಲ್ಲಿ ಅವರನ್ನು ಬರ್ಮಾದ ಮಾಂಡಾಲೇ ಕಾರಾಗೃಹದಲ್ಲಿ ಬಂಧಿಸಿಟ್ಟರು. ಸೆರೆಮನೆಯಲ್ಲಿದ್ದಾಗಲೇ ಅವರು 'ಗೀತಾ ರಹಸ್ಯ' ಎಂಬ ಉದ್‌ಗ್ರಂಥವನ್ನು ಮರಾಠಿಯಲ್ಲಿ ಬರೆದರು.

ತಿಲಕರು 'ಭಾರತೀಯ ಅಶಾಂತಿಯ ಜನಕ'ರೆಂದು ಪ್ರಖ್ಯಾತರಾಗಿದ್ದರು. ದೇಶದ ಸ್ವಾಧೀನತೆ ಹಾಗೂ ಜನತೆಯ ಹಕ್ಕು ಬಾಧ್ಯತೆಯ ರಕ್ಷಣೆಗಾಗಿ ಹೇಗೆ ಹೋರಾಟ ನಡೆಸಬೇಕು, ಎಡರು ತೊಡರುಗಳನ್ನು ಹೇಗೆ ಎದುರಿಸಬೇಕು ಎಂಬ ಬಗ್ಗೆ ಅವರು ರಾಷ್ಟ್ರಕ್ಕೆ ಮಾರ್ಗದರ್ಶನ ನೀಡುತ್ತಿದ್ದರು. ಭಾರತೀಯ ಹೃದಯಸಾಮ್ರಾಜ್ಯದ ಅನಭಿಷಿಕ್ತ ಸಾಮ್ರಾಟರಿವರು! ಅಂಧಕಾರ ಮುಸುಕುತ್ತಿದ್ದ ಕಾಲದಲ್ಲಿ ಕೈಯಲ್ಲೊಂದು ದೀವಟಿಕೆ ಹಿಡಿದು ಅವರು ಕಾಣಿಸಿ ಕೊಂಡರು!

# ಕಾಂಗ್ರೆಸ್ಸಿನ ಮುನ್ನಡೆ

ಸ್ವಾತಂತ್ರ್ಯದ ಮೊದಲ ಹುರಿಯಾಳುಗಳ ಶ್ಲಾಘನೀಯ ಸೇವೆಯಿಂದ ಕಾಂಗ್ರೆಸ್ ಪ್ರಬಲವಾಯಿತು. ದೇಶದ ನಾನಾ ವರ್ಗದ ಜನರು ಲಿಂಗ ಹಾಗೂ ಧರ್ಮದ ಭೇದವಿಲ್ಲದೆ ಕಾಂಗ್ರೆಸ್ ಸೇರಿದರು. ಪೂರ್ವದ ಪುಟ್ಟ ದೇಶವಾದ ಜಪಾನು ೧೯೦೫ರಲ್ಲಿ ರಷ್ಯವನ್ನು ಮಂಚೂರಿಯದಲ್ಲಿ ಸೋಲಿಸಿದುದು "ಪಾಶ್ಚಾತ್ಯರು ಅಜೇಯರು" ಎಂಬ ಭಾವನೆಯನ್ನು ದೂರೀಕರಿಸಿತು. ಭಾರತೀಯರಲ್ಲಿ ಆತ್ಮಗೌರವ ಹೆಚ್ಚಾಯಿತು.

ಮಿತಗಾಮಿಗಳ ಮುಂದಾಳುತನದಲ್ಲಿ ಕಾಂಗ್ರೆಸ್ ತನ್ನ ಅಧಿವೇಶನಗಳಲ್ಲಿ ತೀರ್ಮಾನಿಸಿ, ಸರಕಾರದ ಮುಂದಿಟ್ಟ ಸಾಮಾನ್ಯ ಬೇಡಿಕೆಗಳಿಗೂ 'ಹೃದಯಹೀನ ಬ್ರಿಟಿಷ್ ಸರಕಾರ' ಗಮನ ಕೊಡಲಿಲ್ಲ. ತೀವ್ರಗಾಮಿಗಳು ಇದರಿಂದ ಅಸಂತುಷ್ಟರಾಗಿ ಕಾಂಗ್ರೆಸ್ಸಿನಿಂದ ಹೊರ ಬಂದರು. ಕಾಂಗ್ರೆಸ್ ಇಬ್ಭಾಗವಾಯಿತು. ರಾಷ್ಟ್ರೀಯ ಸ್ವಾತಂತ್ರ್ಯವು ಶಾಂತಿಯುತ ಮಾರ್ಗಗಳಿಂದ ಪ್ರಾಪ್ತವಾಗದೆಂದು ತಿಳಿದ ತೀವ್ರಗಾಮಿಗಳು ಗುಪ್ತ ಸಂಸ್ಥೆಗಳನ್ನು ಕಟ್ಟಿ ಹಿಂಸಾಮಾರ್ಗಕ್ಕಿಳಿದರು. ತೀವ್ರಗಾಮಿಗಳಾದ ಮಹಾರಾಷ್ಟ್ರದ ತಿಲಕರು, ಪಂಜಾಬಿನ ಸಿಂಹ ಲಾಲಾ ಲಜಪತರಾಯರು, ಬಂಗಾಳದ ಬಿಪಿನ್ ಚಂದ್ರ ಪಾಲ್ ಮತ್ತು ಅರವಿಂದ ಘೋಷ್ ಮೊದಲಾದವರು ಹೆಚ್ಚಿನ ಸುಧಾರಣೆಗಳಿಗೆ ಸರಕಾರವನ್ನು ಒತ್ತಾಯ ಪಡಿಸಿದರು. ಬಂಗಾಳೀ ಕಾದಂಬರಿಕಾರ ಬಂಕಿಮಚಂದ್ರ ಚಟರ್ಜಿಯವರು ತಮ್ಮ 'ಆನಂದ ಮಠ' ಕಾದಂಬರಿಯಲ್ಲಿ ಜನತೆಗೆ ನೀಡಿದ 'ಜಾಗೃತ ರಾಷ್ಟ್ರೀಯತೆಯ ಮಂತ್ರ'ವಾದ 'ವಂದೇ ಮಾತರಂ' ರಾಷ್ಟ್ರಗೀತೆ ಇತಿಹಾಸದಲ್ಲಿ ಮೊದಲನೆಯ ಬಾರಿ ಮೊಳಗಿತು! ಜನ ಮನಗಳನ್ನು ಬೆಳಗಿತು! ರಾಷ್ಟ್ರೀಯ ಕವಿವರ್ಯರಾದ ರವೀಂದ್ರನಾಥ

ಟಾಗೋರ್ ಮತ್ತು ಸುಬ್ರಹ್ಮಣ್ಯ ಭಾರತಿಯವರು ರಾಷ್ಟ್ರೀಯ, ದೇಶಾಭಿಮಾನ ಪೂರಿತ ಗೀತೆಗಳನ್ನು ರಚಿಸಿ ಜನ ಮನಗಳನ್ನು ಸೂರೆಗೊಂಡರು. ದೇಶದಲ್ಲಿ ಅಶಾಂತಿ ಮತ್ತು ಗಲಭೆಗಳು ದಿನೇ ದಿನೇ ಬೆಳೆಯುತ್ತಾ ಹೋದವು.

## ಆಂಗ್ಲರ 'ಒಡೆದು ಆಳುವ ನೀತಿ'

ಈ ಚಳವಳಿಯ ಉಗ್ರತೆಯನ್ನು ಕಡಿಮೆ ಮಾಡಲು ಮಿತಗಾಮಿಗಳ ಮತ್ತು ಮುಸಲ್ಮಾನರ ಬೆಂಬಲವನ್ನು ಸಂಪಾದಿಸಲು ಬ್ರಿಟಿಷ್ ಸರಕಾರ ೧೯೦೯ರಲ್ಲಿ "ಮೋರ್ಲೆ–ಮಿಂಟೊ ಸುಧಾರಣೆ"ಗಳನ್ನು ಹೊರಡಿಸಿತು. ಇದರಲ್ಲಿ ಜನತಾ ಪ್ರತಿನಿಧಿಗಳಿಗೆ ಪ್ರಾಂತೀಯ ಮತ್ತು ಕೇಂದ್ರ ಶಾಸನ ಸಭೆಗಳಲ್ಲಿ ಸ್ಥಾನ ನೀಡುವ ಪ್ರಯತ್ನ ನಡೆದಿತ್ತು. ಹಿಂದೂಗಳೊಂದಿಗೆ ಸರಿಸಮಾನತೆ ಉಂಟು ಮಾಡಲು ಮುಸಲ್ಮಾನರಿಗೆ ಪ್ರತ್ಯೇಕ ಮತದಾರ ಸಂಘಗಳನ್ನು ನೀಡಲಾಗಿತ್ತು. ಮಿತಗಾಮಿಗಳಾದ ಗೋಖಲೆಯವರು ಈ ಸುಧಾರಣೆಗಳಿಗೆ ಬೆಂಬಲ ವ್ಯಕ್ತ ಪಡಿಸಿದರು. ತೀವ್ರಗಾಮಿಗಳು ಎಂದಿನಂತೆ ಈ ಸುಧಾರಣೆಗಳನ್ನು ಕಟುವಾಗಿ ವಿರೋಧಿಸಿದರು.

ಈ ಸುಧಾರಣೆಗಳು ಪ್ರತ್ಯಕ್ಷ ಚುನಾವಣಾ ಪದ್ಧತಿಯೊಂದಿಗೆ ಅನಿಷ್ಟ ವಾದ ಜಾತೀಯ ಪ್ರಾಧಾನ್ಯ ಪದ್ಧತಿಯನ್ನು ಜಾರಿಗೆ ತಂದು, ಭಾರತೀಯ ರಾಜಕೀಯದಲ್ಲಿ ಜಾತೀಯ ವಿಷವನ್ನು ತಂದಿಕ್ಕಿದವು. ಈ ರೀತಿಯ ಸರಕಾರದ 'ಒಡೆದು ಆಳುವ ನೀತಿ' ಹಿಂದೂ–ಮುಸ್ಲಿಂ ಐಕ್ಯತೆಗೆ ಭಾರಿ ಪೆಟ್ಟು ಹಾಕಿತು. ೧೯೦೬ರಲ್ಲಿ ಆಗಾಖಾನರ ನೇತೃತ್ವದಲ್ಲಿ ಜನಿಸಿದ 'ಅಖಿಲ ಭಾರತ ಮುಸ್ಲಿಂ ಲೀಗಿ'ಗೆ ಇದು ಉತ್ತೇಜನ ನೀಡಿತು. ವಂಗ–ಭಂಗ ಚಳವಳಿಯ ತೀವ್ರತೆ ಹೆಚ್ಚಾಯಿತು. ತರುಣ ಉಗ್ರವಾದಿಗಳಲ್ಲಿ ಕತ್ತಿ, ಬಂದೂಕು, ರಿವಾಲ್ವರ್, ಬಾಂಬುಗಳ ಬಳಕೆ ಸಾಮಾನ್ಯವಾಯಿತು. ಬಂಗಾಳದಲ್ಲಿ ಅನೇಕ ಬ್ರಿಟಿಷ್ ಅಧಿಕಾರಿಗಳು ಕೊಲೆಗೀಡಾದರು! ಅರವಿಂದಘೋಷ್

ಸಹೋದರರು ಬಂಗಾಳದಲ್ಲಿ, ತಿಲಕ ಮತ್ತು ಸಾವರ್ಕರ್ ಮಹಾರಾಷ್ಟ್ರದಲ್ಲಿ ಕ್ರಾಂತಿಯ ಕಹಳೆಗಳನ್ನೂದುತ್ತಲೆ ಇದ್ದರು! ರಾಷ್ಟ್ರೀಯ ಚಳವಳಿ ದೇಶ ವ್ಯಾಪಿಯಾಯಿತು!

## ಸ್ವಯಂ ಆಡಳಿತ ಬೇಡಿಕೆ

ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಮೊದಲನೆಯ ಮಹಾಯುದ್ಧ ಪ್ರಾರಂಭ ವಾಯಿತು. ಭಾರತವು ವಿರೋಧಿಸಿದರೂ, ಅದು ಯುದ್ಧದಲ್ಲಿ ಭಾಗವಹಿಸ ಬೇಕಾಯಿತು. ಯುದ್ಧದನಂತರ ಪ್ರಗತಿಪರ ಸುಧಾರಣೆಗಳನ್ನೊಳಗೊಂಡ ಜವಾಬ್ದಾರಿ ಸರಕಾರ ಕೊಡುವುದಾಗಿ ಭರವಸೆ ನೀಡಿ ಬ್ರಿಟಿಷರು ಭಾರತೀಯರ ಮನವೊಲಿಸಿಕೊಳ್ಳಲು ಯತ್ನಿಸಿದರು. ಯುದ್ಧಕ್ಕಾಗಿ ಭಾರತ ಅಪಾರ ವೆಚ್ಚ ಮಾಡಬೇಕಾಯಿತು. ಯುದ್ಧವನ್ನು ವಿರೋಧಿಸಿದ ಭಾರತೀಯರನ್ನು ಬಂಧಿಸಲಾಯಿತು. ೧೯೧೫ರಲ್ಲಿ ಮದ್ರಾಸ್ ಕಾಂಗ್ರೆಸ್ ಅಧಿವೇಶನದಲ್ಲಿ 'ಸ್ವಯಂ ಆಡಳಿತದ ಬೇಡಿಕೆ'ಯನ್ನು ಒತ್ತಾಯಿಸಲು ತೀರ್ಮಾನಿಸಲಾಯ್ತು.

೧೯೧೬ರಲ್ಲಿ ಆನಿಬೆಸಂಟ್ 'ಹೋಂ ರೂಲ್' ಚಳವಳಿಯನ್ನು ಆರಂಭಿ ಸಿದರು. ತಿಲಕರೂ 'ಸ್ವರಾಜ್ಯ' ಚಳವಳಿಯನ್ನು ಇದೇ ಕಾಲದಲ್ಲಿ ಆರಂಭಿಸಿ ದರು. ಈ ಚಳವಳಿ ಜನಪ್ರಿಯವೂ ಆಯಿತು. ಆಲಿ ಸಹೋದರರ ಶ್ರಮದಿಂದ ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗ್ ೧೯೧೬ರ ಲಕ್ನೋ ಕಾಂಗ್ರೆಸ್ಸಿನಲ್ಲಿ ಒಪ್ಪಂದಕ್ಕೆ ಬಂದವು. ಉಗ್ರಗಾಮಿಗಳೂ ಮಿತವಾದಿಗಳೂ ಒಂದಾದರು. ಹೀಗಾಗಿ ವಿವಿಧ ಗುಂಪುಗಳಲ್ಲಿ ಸಾಮರಸ್ಯವೇರ್ಪಟ್ಟು ಇಡಿಯ ರಾಷ್ಟ್ರವು ತನ್ನ ಹಕ್ಕುಗಳಿಗಾಗಿ ಒಗ್ಗಟ್ಟಿನಿಂದ ಹೋರಾಡುವ ಒಂದು ವಾತಾವರಣ ಕಲ್ಪಿತ ವಾಯಿತು.

ಸರಕಾರವು ತಾನು ಮಾತುಕೊಟ್ಟಿದ್ದಂತೆ ೧೯೧೯ರಲ್ಲಿ 'ಮಾಂಟ್ ಫರ್ಡ್ ಯೋಜನೆ'ಯೊಂದನ್ನು ಜಾರಿಗೆ ತಂದಿತು. ಆದರೆ ಈ ಸುಧಾರಣೆಗಳಿಂದ

ಆಂಗ್ಲರು ರಾಷ್ಟ್ರಕ್ಕೆ ಬಹಳ ನಿರಾಶೆಯನ್ನುಂಟುಮಾಡಿದರು. ಆನಿ ಬೆಸೆಂಟ್ ಇದನ್ನು 'ಅಯೋಗ್ಯ ಕೊಡುಗೆ' ಎಂದು ಖಂಡಿಸಿದರು. ತಿಲಕರು ಈ ಸುಧಾರಣೆಗಳ ಬಗ್ಗೆ ತೀವ್ರ ಅಸಮಾಧಾನ ವ್ಯಕ್ತಪಡಿಸಿದರು. "ಮಾಂಟೆಗೋ ವರದಿ ಸುಂದರ ಶಬ್ದಗಳ ಮತ್ತು ರಾಜನೀತಿ ನೈಪುಣ್ಯದ ದಾಖಲೆ! ನಾವು ಎಂಟಾಣೆ ಪಾಲಿನ 'ಸ್ವಯಂ ಆಡಳಿತ' ಕೇಳಿದ್ದೆವು. ಈ ವರದಿ ಒಂದಾಣೆ ಪಾಲಿನ ಸ್ವಯಂ ಆಡಳಿತ ನೀಡಿದೆ! ಆದರೆ ಎಂಟಾಣೆಯ ಪಾಲಿಗಿಂತ ಹೆಚ್ಚು ಸ್ವಯಂ ಆಡಳಿತ ದೊರೆತಿದೆಯೆಂದು ವರದಿ ತಿಳಿಸುತ್ತದೆ!" ಎಂದು ತಿಲಕರು ಆ ವರದಿಯನ್ನು ಟೀಕಿಸಿದರು.

# ಗಾಂಧೀಯುಗ

'ಮಾಂಟ್ ಫರ್ಡ್' ಸುಧಾರಣೆಗಳಿಂದ ಅಸಂತೋಷಗೊಂಡಿದ್ದ ಜನರಿಗೆ ೧೯೧೯ನೆಯ ವರ್ಷ ಹರ್ಷದಾಯಕವಾಗಿ ಪರಿಣಮಿಸಿತು. ಇದೇ ವರುಷ ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿಯವರು ಭಾರತದ ಸಾರ್ವಜನಿಕ ಜೀವನದಲ್ಲಿ ಪ್ರವೇಶಿಸಿದರು. ಇದೇ ವರುಷ ಆಂಗ್ಲರ ದಬ್ಬಾಳಿಕೆಯಿಂದ ಬೇಸತ್ತ ಜನರಿಗೆ 'ಸತ್ಯಾಗ್ರಹ' ದೀಕ್ಷೆಯಿತ್ತು ಸ್ವಾತಂತ್ರ್ಯದ ಹೋರಾಟಕ್ಕೆ ಒಂದು ಹೊಸ ಸ್ಫೂರ್ತಿ ನೀಡಿದರು. ಈ ಕಾರಣಗಳಿಗಾಗಿ ಈ ವರುಷ ಭಾರತದ ಇತಿಹಾಸದಲ್ಲಿ ಚಿರಸ್ಮರಣೀಯವಾಗಿದೆ. ೧೯೧೯ರಿಂದ ೧೯೪೭ರ ವರೆಗಿನ ಸ್ವಾತಂತ್ರ್ಯ ಸಮರದ ಕಾಲವನ್ನು '**ಗಾಂಧೀಯುಗ**'ವೆಂದು ವರ್ಣಿಸುವುದು ಸೂಕ್ತ.

ಮಹಾತ್ಮಾ ಗಾಂಧೀಜಿ ವಿದ್ಯಾಭ್ಯಾಸಕ್ಕಾಗಿ ಇಂಗ್ಲೆಂಡಿನಲ್ಲಿದ್ದಾಗ ಅವರು ದಾದಾಭಾಯಿ ನೌರೋಜಿಯವರ ಸಂಪರ್ಕಹೊಂದಿದ್ದರು. ದಕ್ಷಿಣ ಆಫ್ರಿಕದಲ್ಲಿದ್ದಾಗ ಅಲ್ಲಿ ಆಂಗ್ಲರಿಂದ ಹಾಗೂ ಡಚ್ಚರಿಂದ ಕಷ್ಟಕ್ಕೊಳಗಾಗಿದ್ದ ಭಾರತೀಯರ ಹಿತಸಾಧನೆಗಾಗಿ, ಮಾನವೀಯ ಹಕ್ಕುಗಳಿಗಾಗಿ ಅಲ್ಲಿ ಸುಮಾರು ೨೦ ವರ್ಷಗಳ ಕಾಲ ಸತ್ಯಾಗ್ರಹ ಹೂಡಿ ಹೋರಾಡಿದರು.

## 'ಸತ್ಯಾಗ್ರಹ'ದ ಪ್ರಯೋಗ

೧೯೧೫ರಲ್ಲಿ ಸ್ವದೇಶಕ್ಕೆ ಮರಳಿದ ಮೇಲೆ ಗಾಂಧೀಜಿಯವರು ತಮ್ಮ 'ರಾಜಕೀಯ ಗುರು' ಗೋಖಲೆಯವರ ಅಪೇಕ್ಷೆಯ ಮೇರೆಗೆ ದೇಶದಲ್ಲಿನ ವಾತಾವರಣವನ್ನು ಅರಿಯಲು ಒಂದು ವರ್ಷ ಕಳೆದರು. ಅನಂತರ ಚಂಪಾರಣ್ಯ ಮತ್ತು ಖೇಡಗಳಲ್ಲಿಯ ಹೋರಾಟಗಳಲ್ಲಿ ತಮ್ಮ 'ಸತ್ಯಾಗ್ರಹ'ವೆಂಬ

ಅಹಿಂಸಾಸ್ತ್ರವನ್ನು ಯಶಸ್ವಿಯಾಗಿ ಉಪಯೋಗಿಸಿದರು. ಅಹಮದಾಬಾದಿನ ಗಿರಣಿ ಕಾರ್ಮಿಕರು ತಮ್ಮ ಒಡೆಯರ ವಿರುದ್ಧ ಎದ್ದ ಬಂಡಿನಲ್ಲಿ ಅವರು ಕಾರ್ಮಿಕರ ಪರವಾಗಿ ವಾದಿಸಿದರು. ಇದನ್ನು ಎಚ್ಚರದಿಂದ ನಿರೀಕ್ಷಿಸುತ್ತಿದ್ದ ತಿಲಕರು ಸತ್ಯಾಗ್ರಹದ ಉಪಯುಕ್ತತೆಯನ್ನು ಕಂಡುಕೊಂಡರು.

'ಸತ್ಯಾಗ್ರಹ'ದ ತತ್ವವನ್ನು ಮೊದಲ ಬಾರಿ ಗಾಂಧೀಜಿ ಕಂಡುಕೊಂಡುದು ಮತ್ತು ಅದನ್ನು ಯಶಸ್ವಿಯಾಗಿ ಪ್ರಯೋಗಿಸಿದುದು ದಕ್ಷಿಣ ಆಫ್ರಿಕೆಯಲ್ಲಿ. ಸತ್ಯವೇ ದೇವರೆಂದು ಗಾಂಧೀಜಿ ನಂಬಿದ್ದರು. ಅದನ್ನೇ ತಮ್ಮ ಸಕಲ ಹೋರಾಟಗಳಲ್ಲಿ ಮುಖ್ಯ ಗುರಿಯಾಗಿರಿಸಿಕೊಂಡಿದ್ದರು. ಭಾರತದ ರಾಜಕೀಯ, ಸಾಮಾಜಿಕ, ಆರ್ಥಿಕ ರಂಗಗಳಲ್ಲಿ ಗಾಂಧೀಜಿ ಅಪೇಕ್ಷಿಸಿದ್ದ ಎಲ್ಲ ಸುಧಾರಣೆಗಳ ಧ್ಯೇಯೋದ್ದೇಶಗಳ ಒರೆಗಲ್ಲು ಸತ್ಯವೆಂದೇ ಅವರು ಒತ್ತಿ ಹೇಳುತ್ತಿದ್ದರು. ಗಾಂಧೀಜಿಯ ಜೀವನವೆಲ್ಲ ಸತ್ಯದ ಒಂದು ವಿಶೇಷ ಪ್ರಯೋಗವೇ ಆಗಿತ್ತು. ಅಂತೆಯೆ ತಮ್ಮ 'ಆತ್ಮ ಕಥೆ'ಯನ್ನು 'ಸತ್ಯ ಶೋಧನೆ' ಎಂದು ಅವರು ಕರೆದರು. ಈ ವಿಶಿಷ್ಟ ರೀತಿಯ ಸತ್ಯ ಶೋಧನೆಯ ಹೆಣಗಾಟದಲ್ಲಿ ಅವರು ಬಳಸುತ್ತಿದ್ದ ಸಾಧನವು ಅಹಿಂಸೆಯಾಗಿತ್ತು. ಸತ್ಯ ಮತ್ತು ಅಹಿಂಸೆ—ಇವೆರಡೂ ಒಂದೇ ನಾಣ್ಯದ ಎರಡು ಮುಖಗಳೆಂದು ಅವರು ಹೇಳುತ್ತಿದ್ದರು. 'ಅಹಿಂಸೆ' ಎಂದರೆ ಹಿಂಸೆ ಮಾಡದಿರುವುದು ಎಂಬುದು ಅದರ ನಿಷೇಧ ರೂಪದ ಅರ್ಥವೆಂದೂ ಅದರ ವಾಸ್ತವಿಕ ಹಾಗೂ ನೈಜ ರೂಪದ ಅರ್ಥ 'ಪ್ರೇಮ'ವೆಂದೂ ಗಾಂಧೀಜಿ ನಂಬಿದ್ದರು. ಹೀಗೆ ಅವರ 'ಸತ್ಯಾಗ್ರಹ'ದ ಪ್ರಯೋಗದಲ್ಲಿ ಸತ್ಯದ ಗುರಿಯನ್ನು ಸಾಧಿಸಬಲ್ಲ ಸಾಧನ ಪ್ರೇಮವೇ ಆಗಿತ್ತು. 'ಸತ್ಯಾಗ್ರಹ' ತತ್ವವನ್ನು ಗಾಂಧೀಜಿ ಬೋಧಿಸುತ್ತಿದ್ದುದು ಮಾತ್ರವಲ್ಲ; ತಾವು ಸ್ವತಃ ಕಾರ್ಯರೂಪದಲ್ಲಿ ಅದನ್ನು ತಂದು ಅದರ ಅಗಾಧ ಶಕ್ತಿಯನ್ನು ಜನತೆಗೆ ಪ್ರಕಟಿಸುತ್ತಿದ್ದರು. ಸತ್ಯಾಗ್ರಹದ ಅನೇಕ ಪ್ರಯೋಗಗಳಲ್ಲಿ ಅವರಿಗೆ ಜೀವದ ಹಂಗಿರಲಿಲ್ಲ; ಸದಾ ನಿರ್ಭೀತರಾಗಿರುತ್ತಿದ್ದರು; ಭಗವದ್ಗೀತೆಯ 'ಸಮತೆ'ಯನ್ನು ಸಾಧಿಸುತ್ತಿದ್ದ 'ಸ್ಥಿತಪ್ರಜ್ಞ'ರೇ ಆಗಿರುತ್ತಿದ್ದರು!

ಹಿಂಸೆಯ ಶಸ್ತ್ರಾಸ್ತ್ರಗಳು ಸಾಧಿಸದ ಮಹೋನ್ನತ ಗುರಿಗಳನ್ನು 'ಅಹಿಂಸಾಸ್ತ್ರ'ವು ಸಾಧಿಸುವುದೆಂದೂ 'ಅಹಿಂಸಾಸ್ತ್ರ'ದಿಂದ ಹೋರಾಡುವ ಸತ್ಯಾಗ್ರಹಿಯೇ ನಿಜವಾದ 'ವೀರ'ನೆಂದೂ ಗಾಂಧೀಜಿಯ ಬೋಧೆಯಾಗಿತ್ತು. ಗಾಂಧೀಜಿ ಬೋಧಿಸುತ್ತಿದ್ದ ಮಟ್ಟದ 'ಸತ್ಯಾಗ್ರಹಿ'ಗಳು ಕೋಟಿಗೊಬ್ಬರಾದರೂ ದೊರೆಯುವರೋ ಇಲ್ಲವೊ! ಆದರೆ ಗಾಂಧೀಜಿ ಮಾತ್ರ ಅಂತಹ ಆದರ್ಶ 'ಸತ್ಯಾಗ್ರಹಿ' ಆಗಿದ್ದರೆಂದು ತಿಲಕ-ಗೋಖಲೆಯವರಂಥ ಅಂದಿನ ನೇತಾರರು ಮನಗಂಡು ತಲೆದೂಗಿದುದು ನಿಜ.

ಅಂತೇ ಆ ಕಾಲದ ಭಾರತದ ಅದ್ವಿತೀಯ ಮುಖಂಡರೆನಿಸಿದ್ದ ಲೋಕಮಾನ್ಯ ತಿಲಕರು ರಾಜಕೀಯ ಸ್ವಾತಂತ್ರ್ಯ ಸಂಗ್ರಾಮದ ಹೊಣೆಯನ್ನೆಲ್ಲ ಗಾಂಧೀಜಿಗೆ ಒಪ್ಪಿಸಿ ತಾವು ಅವರ ಸಲಹೆಗಾರರಾಗಿ ಉಳಿಯುವುದು ಒಳಿತೆಂದು ಭಾವಿಸಿದರು !

ಹೀಗೆ ಭಾರತಕ್ಕೆ ಮರಳಿ ಬಂದ ತರುಣದಲ್ಲೇ ಗಾಂಧೀಜಿ ಸ್ವಾತಂತ್ರ್ಯ ಸಮರಗಳ ಆ ಕಾಲದ ನಾಯಕರೆಲ್ಲರ ಮತ್ತು ಜನತಾಕೋಟಿಯ ಹೃದಯಗಳನ್ನು ಸೂರೆಗೊಂಡರು ! 'ಮಹಾತ್ಮ' ಎಂಬ ಅಚ್ಚು ಮೆಚ್ಚಿನ ಸಾರ್ಥಕ ಬಿರುದನ್ನು ಪಡೆದರು.

## ಜಲಿಯನ್‌ವಾಲಾಬಾಗ್ ಹತ್ಯಾಕಾಂಡ

ಗಾಂಧೀಜಿಯವರು ಭಾರತದ ರಾಜಕೀಯವನ್ನು ಪ್ರವೇಶಿಸಿದ್ದು 'ರೌಲತ್' ಶಾಸನವನ್ನು ವಿರೋಧಿಸುವ ಮೂಲಕ. ರಾಷ್ಟ್ರದ ಕ್ರಾಂತಿಕಾರೀ ಪರಿಸ್ಥಿತಿಯನ್ನು ಎದುರಿಸಲು 'ರೌಲತ್' ಶಾಸನ ಸರಕಾರಕ್ಕೆ ವಿಶೇಷಾಧಿಕಾರವನ್ನು ನೀಡಿತ್ತು. ದೇಶದ್ರೋಹಿಗಳೆಂದು ಹೆಸರಿಟ್ಟು ಸ್ವಾತಂತ್ರ್ಯ ಹೋರಾಟಗಾರರನ್ನು ವಿಚಾರಣೆಯಿಲ್ಲದೆ ಅನಿಯಮಿತ ಅವಧಿಯವರೆಗೆ ಬಂಧಿಸಿಡುವುದೇ ಈ ವಿಶೇಷಾಧಿಕಾರ. ಭಾರತೀಯರು ವಿರೋಧಿಸಿದ್ದರೂ ಈ

ಶಾಸನವು ಮಂಜೂರಾಗಿತ್ತು. ೧೯೧೯ನೆಯ ಏಪ್ರಿಲ್ ೬ರಂದು ಗಾಂಧೀಜಿ 'ಹರತಾಳ'ಕ್ಕೆ ಕರೆ ನೀಡಿದರು. ಪಂಜಾಬ್ ಮತ್ತು ದೆಹಲಿಗಳಲ್ಲಿ ಗಲಭೆ ಗಳುಂಟಾದವು ಗಾಂಧೀಜಿ ಬಂಧನಕ್ಕೊಳಗಾದರು.

ಗಾಂಧೀಜಿಯ ಬಂಧನದ ವಿರುದ್ಧ ಅಮೃತಸರದಲ್ಲಿ ದೊಡ್ಡ ಗಲಭೆಯಾ ಯಿತು. ದಬ್ಬಾಳಿಕೆಯ ವಿರುದ್ಧ ನಡೆದ ಮೆರವಣಿಗೆಯ ಮೇಲೆ ಪೊಲೀಸರು ಗುಂಡು ಹಾರಿಸಿ ಕೆಲವರನ್ನು ಕೊಂದರು. ಜನರನ್ನು ತುಳಿದಿಡುವುದು ಪೊಲೀಸರ ಶಕ್ತಿಗೆ ಮೀರಿದಾಗ, ಅಮೃತಸರವನ್ನು ಸೈನ್ಯಕ್ಕೆ ಒಪ್ಪಿಸಲಾಯಿತು!

ಪೊಲೀಸರ ಅತ್ಯಾಚಾರವನ್ನು ಖಂಡಿಸಲು ಏಪ್ರಿಲ್ ೧೩ರಂದು ಅಮೃತ ಸರದ ನಾಗರಿಕರು ಜಲಿಯನ್‌ವಾಲಾ ಉದ್ಯಾನದಲ್ಲಿ ಸಭೆ ಸೇರಿದರು. ಸಭೆ ಆರಂಭವಾದೊಡನೆ ಜನರಲ್ ಡಯರ್ ಸಜ್ಜಿತ ಸೇನೆಯೊಡನೆ ಬಂದು ಸಭಾ ಸ್ಥಳವನ್ನು ಸುತ್ತುಗಟ್ಟಿ ಮುತ್ತಿದ. ಸೈನಿಕರು ಮದ್ದುಗುಂಡು ತೀರುವವರೆಗೂ ನೆರೆದ ಜನ ಸಮುದಾಯದ ಮೇಲೆ ಗುಂಡು ಹಾರಿಸಿ ೩೭೯ ಜನರನ್ನು ಕೊಂದು ೧೧೩೭ ಜನರನ್ನು ಗಾಯಗೊಳಿಸಿದರು!

ಈ ಹತ್ಯಾಕಾಂಡ ಭಾರತೀಯರನ್ನು ಕ್ರೋಧಾಗ್ನಿಯಿಂದ ಸಿಡಿದೆಬ್ಬಿ ಸಿತು! ಹಿಂದೂ ಮತ್ತು ಮುಸಲ್ಮಾನರು ಏಕಕಂಠದಿಂದ ಇದನ್ನು ಕಟುವಾಗಿ ಟೀಕಿಸಿದರು. ರವೀಂದ್ರನಾಥ ಠಾಕೂರರು ತಮ್ಮ 'ನೈಟ್' ಪದವಿಯನ್ನು ಸರಕಾರಕ್ಕೆ ಹಿಂತಿರುಗಿಸಿದರು. ಗಾಂಧೀಜ 'ಅಸಹಕಾರ' ಚಳವಳಿಯನ್ನು ಆರಂಭಿಸಲು ತೀರ್ಮಾನಿಸಿದರು.

## ಅಸಹಕಾರ ಚಳವಳಿ

ಅಸಹಕಾರ ಚಳವಳಿಯನ್ನು ಕಾಂಗ್ರೆಸ್ ತನ್ನ ಕಲ್ಕತ್ತೆಯ ಅಧಿವೇಶನ ದಲ್ಲಿ ಅನುಮೋದಿಸಿತು. ಶೈಕ್ಷಣಿಕ ಸಂಸ್ಥೆಗಳಿಗೆ ಬಹಿಷ್ಕಾರ, ನ್ಯಾಯಾ

ಲಯಗಳ ತ್ಯಾಗ, ಮತ್ತು ಹೊಸ ಕೌನ್ಸಿಲ್‌ಗಳ ವರ್ಜನೆ: ಇವು ಈ ಚಳವಳಿಯ ಅಂಗಗಳಾಗಿದ್ದವು. ಶೀಘ್ರವೇ ಈ ಚಳವಳಿ ಜನಪ್ರಿಯವಾಯಿತು. ದೇಶ ಪ್ರೇಮಿಗಳಾದ ಸಿ. ಆರ್. ದಾಸ್, ಮೋತಿಲಾಲ್ ನೆಹರು, ಜವಹರಲಾಲ್ ನೆಹರು, ಲಾಲಾ ಲಜಪತ್ ರಾಯ್, ವಲ್ಲಭಭಾಯಿ ಪಟೇಲ್, ರಾಜೇಂದ್ರ ಪ್ರಸಾದ್ ಮೊದಲಾದವರು ತಮ್ಮ ಅಧಿಕ ಆದಾಯದ ವಕೀಲಿ ವೃತ್ತಿಗಳನ್ನು ತ್ಯಜಿಸಿ ಅಸಹಕಾರ ಚಳವಳಿಯನ್ನು ಕೂಡಿಕೊಂಡರು. ಆಲಿ ಸಹೋದರರು, ಮೌಲಾನಾ ಅಜಾದ್ ಮುಂತಾದ ಮುಸ್ಲಿಂ ನಾಯಕರು ಚಳವಳಿಯಲ್ಲಿ ಭಾಗವಹಿಸಿದರು. ಯುವಕರ ವಿದ್ಯಾಭ್ಯಾಸದ ಅನುಕೂಲಕ್ಕಾಗಿ ಕಾಶಿ ವಿದ್ಯಾ ಪೀಠ, ಗುಜರಾತ್ ವಿದ್ಯಾಪೀಠ, ಬಿಹಾರ ವಿದ್ಯಾಪೀಠ, ಬಂಗಾಳ ರಾಷ್ಟ್ರೀಯ ವಿಶ್ವವಿದ್ಯಾನಿಲಯ, ಲಾಹೋರಿನ ರಾಷ್ಟ್ರೀಯ ಕಾಲೇಜು, ಅಲಿಘರ್ ಮುಸ್ಲಿಂ ವಿಶ್ವವಿದ್ಯಾನಿಲಯ ಮೊದಲಾದ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳು ಹುಟ್ಟಿ ಕೊಂಡವು. ಸರಕಾರವು ತಮಗೆ ಹಿಂದಕ್ಕೆ ನೀಡಿದ್ದ 'ಕೈಸರ್-ಇ-ಹಿಂದ್' ಪ್ರಶಸ್ತಿಯನ್ನು ಗಾಂಧೀಜಿಯವರು ಹಿಂದಿರುಗಿಸಿದರು.

೧೯೨೧ರಲ್ಲಿ ಮುಂಬಯಿಗೆ ಪ್ರಿನ್ಸ್ ಆಫ್ ವೇಲ್ಸ್ ಬಂದಾಗ, ರಾಷ್ಟ್ರದ ಅಶಾಂತಿಯನ್ನು ಸೂಚಿಸುವ ಸಲುವಾಗಿ ಗಾಂಧೀಜಿ ಹರತಾಳಕ್ಕೆ ಕರೆ ನೀಡಿದರು. ಉತ್ತರ ಪ್ರದೇಶದ ಚೌರಿಚೌರಾದಲ್ಲಿ ಈ ಹರತಾಳ ಉಗ್ರ ರೂಪ ತಳೆಯಿತು. ಕಾಂಗ್ರೆಸ್ ಸ್ವಯಂ ಸೇವಕರು ಪೋಲೀಸ್ ಠಾಣೆಯೊಂದಕ್ಕೆ ಬೆಂಕಿಯಿಟ್ಟು, ಅದನ್ನು ಆಕ್ರಮಿಸಿ ಕೆಲವು ನೌಕರರನ್ನು ಕೊಂದರು! ಗಾಂಧೀಜಿ ಮತ್ತು ಇತರ ನಾಯಕರು ಬಂಧನಕ್ಕೊಳಪಟ್ಟರು. ಈ ಚಳವಳಿ ಹಿಂಸಾರೂಪ ತಳೆದುದಕ್ಕೆ ದುಃಖಿಸಿದ ಗಾಂಧೀಜಿ ಅಸಹಕಾರ ಚಳವಳಿಯನ್ನು ನಿಲ್ಲಿಸಿದರು.

## 'ಸ್ವರಾಜ್ಯ ಪಕ್ಷ'

ಗಾಂಧೀಜಿಯವರ ಈ ವರ್ತನೆ ಅನೇಕ ಕಾಂಗ್ರೆಸ್ ಧುರೀಣರನ್ನು ಅಸಮಾಧಾನಗೊಳಿಸಿತು. ಮೋತಿಲಾಲ್ ನೆಹರು, ಲಜಪತ್‌ರಾಯ್,

ಸಿ. ಆರ್. ದಾಸ್ ಮುಂತಾದವರು ೧೯೨೩ರಲ್ಲಿ 'ಸ್ವರಾಜ್ಯ ಪಕ್ಷ'ವನ್ನು ಸ್ಥಾಪಿಸಿದರು. ಬ್ರಿಟಿಷರ ಕ್ರೂರ ಶಾಸನಗಳನ್ನು ವಿರೋಧಿಸುವುದು, ಭಾರತೀಯರಿಗೆ ಅನುಕೂಲಕರವಾದ ಶಾಸನಗಳನ್ನು ರಚಿಸುವುದು, ಶಾಸಕಾಂಗಗಳನ್ನು ಸೇರಿ ಸರಕಾರಿ ಯಂತ್ರವನ್ನು ನಿಷ್ಕ್ರಿಯಗೊಳಿಸುವುದು ಈ ಪಕ್ಷದ ಉದ್ದೇಶಗಳಾಗಿದ್ದವು. ಶಾಸಕಾಂಗವನ್ನೂ ಪ್ರವೇಶಿಸಿ, ಸಾಕಷ್ಟು ವಿಧಾಯಕ ಕಾರ್ಯ ಮಾಡಿ ಈ ಪಕ್ಷ ೧೯೨೭ರಲ್ಲಿ ಅಂತ್ಯಗೊಂಡಿತು.

## ಬಾರ್ಡೋಲಿ ಸತ್ಯಾಗ್ರಹ

೧೯೨೮ರಲ್ಲಿ ಮಳೆಯಿಲ್ಲದೆ ತೀಕ್ಷ್ಣ ಬರಗಾಲದಿಂದ ಪೀಡಿತವಾದ ಗುಜರಾತವು ಭೂಕಂದಾಯ ವಿನಾಯಿತಿಗಾಗಿ ಸರಕಾರವನ್ನು ಬೇಡಿತು. ಸರಕಾರ ಈ ಬೇಡಿಕೆಯನ್ನು ಕಡೆಗಣಿಸಿತು. ಬಾರ್ಡೋಲಿ ತಾಲ್ಲೂಕಿನ ರೈತರು ಸತ್ಯಾಗ್ರಹಕ್ಕೆ ಸಿದ್ಧರಾದರು. ಭೂಕಂದಾಯವನ್ನು ಕೊಡುವುದಿಲ್ಲವಾಗಿ ಪಟ್ಟು ಹಿಡಿದು ಕುಳಿತರು. ಸರ್ದಾರ್ ವಲ್ಲಭ ಭಾಯಿ ಪಟೇಲರ ನೇತೃತ್ವದಲ್ಲಿ ಈ ಕರ ನಿರಾಕರಣೆಯ ಸತ್ಯಾಗ್ರಹ ಮುಂದುವರಿಯಿತು. ಸರಕಾರ ರೈತರ ಹೊಲಮನೆಗಳನ್ನು ಜಪ್ತಿಮಾಡುವುದು ಮುಂತಾಗಿ ದಬ್ಬಾಳಿಕೆಯನ್ನು ನಡೆಸಿತು. ಆದರೂ ಸತ್ಯಾಗ್ರಹಿಗಳು ಯಾವುದಕ್ಕೂ ಮಣಿಯಲಿಲ್ಲ. ಕೊನೆಗೆ ಸರಕಾರವೇ ಒಪ್ಪಂದಕ್ಕೆ ಬರಬೇಕಾಯ್ತು. ಕರ ನಿರಾಕರಣೆಯ ಈ ಯಶಸ್ವೀ ಸತ್ಯಾಗ್ರಹ ದೇಶದ ತುಂಬ ಜಾಗೃತಿಯುಂಟುಮಾಡಿತು. ಜನತೆ ಹಿಂಸೆಗೆ ಅವಕಾಶವೀಯದೆ, ಶಾಂತರೀತಿಯಲ್ಲಿ ಗಟ್ಟಿಯಾಗಿ ನಿಂತು, ನ್ಯಾಯಕ್ಕಾಗಿ ಸತ್ಯಾಗ್ರಹ ಮಾಡಿದಲ್ಲಿ ಯಶಸ್ಸು ಖಂಡಿತ ಎಂಬ ಮನವರಿಕೆ ಬಾರ್ಡೋಲಿ ಸತ್ಯಾಗ್ರಹದಿಂದ ಉಂಟಾಯ್ತು. ಸತ್ಯಾಗ್ರಹ ಪ್ರಯೋಗದಲ್ಲಿ ತನ್ನ ಜನರನ್ನು ನಿಶ್ಶಸ್ತ್ರಗೊಳಿಸಿದ ಗಾಂಧೀಜಿ ಬ್ರಿಟಿಷ್ ಸರಕಾರವನ್ನೇ ನಿಶ್ಶಸ್ತ್ರಗೊಳಿಸಿದಂತಾಯ್ತು! ಎಂದರೆ ಸತ್ಯಾಗ್ರಹದಲ್ಲಿ ಬಳಸುವ ಅಹಿಂಸಾಸ್ತ್ರದಿಂದ ಸರಕಾರದ ಹಿಂಸಾಶಸ್ತ್ರಾಸ್ತ್ರಗಳೆಲ್ಲ ನಿಷ್ಪ್ರಯೋಜಕವೆನಿಸಿದವು!

## 'ಹಿಂತಿರುಗಿ ಹೋಗು ಸೈಮನ್'

ಇದೇ ವೇಳೆಗೆ ಸೈಮನ್ ಕಮಿಷನ್ ಭಾರತ ಸಂಚಾರ ಕೈಕೊಂಡು ಲಾಹೋರಿಗೆ ಬಂತು. ಆಗ ಸೈನಿಕರ ಹಾಗೂ ಪೋಲೀಸರ ಭದ್ರಕಾವಲು ಜೋರಾಗಿತ್ತು. ಕಪ್ಪುಧ್ವಜಗಳ ಪ್ರದರ್ಶನ ಮಾಡುತ್ತ 'ಹಿಂತಿರುಗಿ ಹೋಗು ಸೈಮನ್' ಘೋಷಣೆ ಮಾಡುತ್ತ ಬಹುದೊಡ್ಡ ಜನಸಮುದಾಯದ ಮೆರವಣಿಗೆ ಹೊರಟಿತು. ಪಂಜಾಬದ ಸಿಂಹ ಲಾಲಾ ಲಜಪತ್‌ರಾಯ್, ಡಾ.ಸತ್ಯಪಾಲ್ ಮುಂತಾದವರ ನೇತೃತ್ವದಲ್ಲಿ ಶಾಂತರೀತಿಯಲ್ಲಿ ಶಿಸ್ತಿನಿಂದ ಪ್ರದರ್ಶನಕಾರರು ನಡೆದಿದ್ದರು. ಸೈನಿಕರು ಪ್ರದರ್ಶನಕಾರರ ಮೇಲೆ ಬಿದ್ದು ಲಾಠೀ ಹೊಡೆತ ಗಳಿಂದ ಜನರನ್ನು ಚದರಿಸತೊಡಗಿದರು. ಲಾಲಾ ಲಜಪತರಾಯರಿಗೇ ಎದೆಯ ಗುಂಡಿಗೆಯ ಮೇಲೆ ಬಲವಾದ ಲಾಠೀ ಪೆಟ್ಟುಗಳು ಬಿದ್ದು ಅವರು ಗಾಯಗೊಂಡರು. ದೇಶದ ತುಂಬ ಹಾಹಾಕಾರವುಂಟಾಯ್ತು ! ಜನ ಕೆರ ಳಿತು. ಅತ್ಯಂತ ಜನಪ್ರಿಯ ನಾಯಕನಿಗೂ ಲಾಠೀ ಪೆಟ್ಟುಗಳು ಬೀಳ ಬೇಕೆ ? ಬ್ರಿಟಿಷ್ ಸರಕಾರದ ಉನ್ಮತ್ತತೆ ಮಿತಿ ಮೀರಿತೆಂದು ದೇಶದ ಜನ ಶಾಪ ಹಾಕಿತು! ಎದೆಗೆ ಬಿದ್ದ ಲಾಠೀ ಪೆಟ್ಟುಗಳು ಕೆಲವಾರಗಳಲ್ಲೇ ಲಾಲಾಜಿಯ ಪ್ರಾಣವನ್ನೇ ಹೀರಿದವು ! ತಮ್ಮ ಮೇಲೆ ಬಿದ್ದ ಒಂದೊಂದು ಪೆಟ್ಟೂ ಬ್ರಿಟಿಷ್ ಸರಕಾರದ ಶವಪೆಟ್ಟಿಗೆಯ ಮೊಳೆಗಳ ಮೇಲೆ ಜಡಿದ ಪೆಟ್ಟುಗಳೆಂದು ಲಾಲಾಜಿ ಉದ್ಗರಿಸಿದ್ದರು !

ಲಾಲಾಜಿಯ ಸಾವಿನಿಂದ ಉಗ್ರವಾದೀ ತರುಣರು ಕಂಗೆಟ್ಟು ಹುಚ್ಚಾ ದರು! ಲಾಲಾಜಿಗೆ ಲಾಠೀ ಪೆಟ್ಟು ಕೊಟ್ಟಿದ್ದ ಅಸಿಸ್ಟಂಟ್ ಪೋಲೀಸ್ ಕಮಿಷ ನರ್ ಸ್ಯಾಂಡರ್ಸನ್ ಕೆಲದಿನಗಳಲ್ಲೇ ಕೊಲೆಗೀಡಾದ.

ಕೆಲದಿನಗಳಲ್ಲೇ ದೆಹಲಿಯ ಕೇಂದ್ರ ಶಾಸನ ಸಭೆಯ ಮೇಲೂ ಬಾಂಬು ಗಳು ಬಿದ್ದವು. ಈ ಬಾಂಬ್ ಒಗೆತ ಯಾರ ಕೊಲೆಗೂ ಕಾರಣವಾಗಿರದೆ, ಬ್ರಿಟಿಷ್ ದಬ್ಬಾಳಿಕೆಗೆ ಸೊಪ್ಪು ಹಾಕದ ತರುಣ ಭಾರತವೊಂದು ಇದೀಗ

ಜಾಗೃತವಾಗಿದೆ ಎಂಬ ಎಚ್ಚರಿಕೆಯ ಗಂಭೀರ ಸೂಚನೆ ಅದರಿಂದ ಧ್ವನಿಸುತ್ತಿತ್ತು. ಆರೋಪಿಗಳಾಗಿದ್ದ ಭಗತ್‌ಸಿಂಗ್, ರಾಜಗುರು, ಸುಖದೇವ್ ಇವರನ್ನು ಬ್ರಿಟಿಷ್ ಸರಕಾರ ಗಲ್ಲಿಗೇರಿಸಿತು. ಮಹಾತ್ಮರು ಈ ತರುಣರ ಹಿಂಸಾ ಪ್ರತಿಕ್ರಿಯೆಯನ್ನು ಒಪ್ಪದಿದ್ದರೂ ಅವರ ದೇಶಭಕ್ತಿಯ ಹಾಗೂ ಆತ್ಮ ಬಲಿದಾನದ ಉತ್ಕಟ ಮಾದರಿಯನ್ನು ತುಂಬ ಕೊಂಡಾಡಿದರು. ಅವರ ಪ್ರಾಣಗಳನ್ನು ಉಳಿಸುವ ಉದ್ದೇಶದಿಂದ ಗಾಂಧೀಜಿ ವೈಸ್‌ರಾಯರಿಗೆ ಕಳಿಸಿದ ಕೋರಿಕೆ ಫಲಿಸಲಿಲ್ಲ. ಈ ಮೂವರು ಹುತಾತ್ಮರು ಎಷ್ಟೂ ಎದೆಗೆಡದೆ ಗಲ್ಲಿನ ಸ್ಥಳಕ್ಕೆ ಹೋಗಿ ಶಾಂತ, ಗಂಭೀರ ಮುಖಮುದ್ರೆಯಿಂದಲೇ ಸಾವನ್ನು ಸ್ವಾಗತಿಸಿದ ಆ ಸನ್ನಿವೇಶ ಭಾರತದ ಸ್ವಾತಂತ್ರ್ಯ ಸಮರಗಳಲ್ಲಿ ಚಿರಸ್ಮರಣೀಯವಾಯ್ತು. ಅನಂತರದ ಸ್ವಾತಂತ್ರ್ಯ ಹೋರಾಟಗಾರರಿಗೆ ಸ್ಫೂರ್ತಿಪ್ರದವಾಯ್ತು.

## ರಾಷ್ಟ್ರದ ಗುರಿ ಪೂರ್ಣ ಸ್ವಾತಂತ್ರ್ಯ

೧೯೨೯ರಲ್ಲಿ ಲಾಹೋರಿನಲ್ಲಿ ಜವಹರ್‌ಲಾಲ್ ನೆಹರೂ ಅವರ ಅಧ್ಯಕ್ಷತೆಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನವು "ಪೂರ್ಣ ಸ್ವಾತಂತ್ರ್ಯವೇ ಕಾಂಗ್ರೆಸ್ಸಿನ ಗುರಿ" ಎಂದು ಘೋಷಿಸಿತು. ಅದರಂತೆ ೧೯೩೦ರ ಜನವರಿ ೨೬ ಪೂರ್ಣ ಸ್ವಾತಂತ್ರ್ಯದಿನವೆಂದು ಆಚರಿಸಿ ಹೋರಾಟವನ್ನು ಆರಂಭಿಸಲಾಯ್ತು.

## ದಾಂಡೀ ಯಾತ್ರೆ

ಈ ಹೋರಾಟವೇ ಹೆಸರಾಂತ ಕಾನೂನು ಭಂಗ ಚಳವಳಿ. ಉಪ್ಪಿನ ಮೇಲೆ ಹೇರಿದ್ದ ಭಾರಿ ಕರವನ್ನು ವಿರೋಧಿಸಲು ಗಾಂಧೀಜಿ ಸಬರಮತಿ ಆಶ್ರಮದಿಂದತಮ್ಮ ಪ್ರಸಿದ್ಧ ದಾಂಡೀ ಯಾತ್ರೆಯನ್ನು ೧೯೩೦ರಲ್ಲಿ ಕೈಕೊಂಡರು. ಈ ಐತಿಹಾಸಿಕ ಉಪ್ಪಿನ ಸತ್ಯಾಗ್ರಹದಲ್ಲಿ ಜವಹರ್‌ಲಾಲ್ ನೆಹರೂ ಮೊದಲಾದ

ಕಾಂಗ್ರೆಸ್ ನಾಯಕರು ಬಂಧಿಸಲ್ಪಟ್ಟರು. ಗಾಂಧೀಜಿಯವರನ್ನು ಯರವಾಡ ಸೆರೆಮನೆಯಲ್ಲಿ ಬಂಧಿಸಿಡಲಾಯಿತು.

## ಗಾಂಧಿ-ಐರ್ವಿನ್ ಒಪ್ಪಂದ

ಗಾಂಧೀಜಿಯವರನ್ನು ಸೆರೆಯಿಂದ ಬಿಡುಗಡೆ ಮಾಡಿದ ಮೇಲೆ ಅವರು ಮತ್ತು ವೈಸ್ರಾಯ್ ಐರ್ವಿನ್ ನಡುವೆ ಮಾತುಕತೆ ನಡೆದು ಒಪ್ಪಂದವೇರ್ಪಟ್ಟಿತು. ಈ ಒಪ್ಪಂದದ ನಂತರ ಉಪ್ಪಿನ ತೆರಿಗೆ ಮತ್ತು ಕಾಂಗ್ರೆಸ್ ಮೇಲಣ ಪ್ರತಿಬಂಧಕಗಳು ರದ್ದಾದವು. ಆದರೆ ರಾಜಕೀಯ ಪ್ರಶ್ನೆ ಮಾತ್ರ ಇತ್ಯರ್ಥವಾಗದೆ ಉಳಿಯಿತು. ಮುಂದೆ ನಡೆದ ದುಂಡುಮೇಜಿನ ಪರಿಷತ್ತುಗಳಾಗಲೀ ೧೯೩೫ರಲ್ಲಿ ಜಾರಿಗೆ ಬಂದ ಹೊಸ ಸಂವಿಧಾನವಾಗಲೀ ಗಾಂಧೀಜಿಯ ಮನಸ್ಸಿಗೆ ಶಾಂತಿಯುಂಟು ಮಾಡಲಿಲ್ಲ. ಆದರೆ ಈ ಹೊಸ ಸಂವಿಧಾನದ ಪ್ರಕಾರ ಕಾಂಗ್ರೆಸ್ ಪ್ರತಿನಿಧಿಗಳು ಕೆಲವು ಪ್ರಾಂತಗಳಲ್ಲಿ ಸರಕಾರಗಳನ್ನು ಸ್ಥಾಪಿಸಿ ದೇಶಸೇವಾ ದೃಷ್ಟಿಯಿಂದ ದುಡಿದರು. ಆದರೆ ಪ್ರಜಾ ಪ್ರತಿನಿಧಿಗಳಾದ ಇವರ ಒಪ್ಪಿಗೆ ಪಡೆಯದೆ ೧೯೩೯ರ ಸೆಪ್ಟೆಂಬರ್ ತಿಂಗಳಲ್ಲಿ ಆರಂಭವಾದ ದ್ವಿತೀಯ ಮಹಾಯುದ್ಧದಲ್ಲಿ ಭಾರತವು ಪಾಲ್ಗೊಳ್ಳುವಂತೆ ಬ್ರಿಟಿಷರು ಯೋಜಿಸಿದ್ದಕ್ಕಾಗಿ ಕಾಂಗ್ರೆಸ್ ಮಂತ್ರಿ ಮಂಡಲಗಳು ನವಂಬರ್ ತಿಂಗಳಲ್ಲಿ ರಾಜೀನಾಮೆ ನೀಡಿದವು. ಹೊಸ ಸಂವಿಧಾನ ಮುರಿದು ಬಿತ್ತು !

## ವೈಯಕ್ತಿಕ ಸತ್ಯಾಗ್ರಹ

ಭಾರತದಲ್ಲಿ ಆಂಗ್ಲರ ನಿರಂಕುಶ ಆಡಳಿತ ಮುಂದುವರಿಯಿತು. ಆದರೆ ಗಾಂಧೀಜಿ ಬ್ರಿಟಿಷ್ ವಿನಾಶದಿಂದ ಸ್ವಾತಂತ್ರ್ಯ ಸಂಪಾದಿಸುವ ಇಚ್ಛೆ ತಮಗಿಲ್ಲವೆಂದು ಪ್ರಕಟಿಸಿದರು. ದೇಶದ ರಕ್ಷಣಾ ವ್ಯವಸ್ಥೆಗಾಗಿ ಜನಧನ ಬೆಂಬಲ

ದೊಂದಿಗೆ ಹೃತ್ಪೂರ್ವಕವಾಗಿ ಬ್ರಿಟಿಷ್ ಸರಕಾರದೊಂದಿಗೆ ಸಹಕರಿಸಲು ಕಾಂಗ್ರೆಸ್ ತೀರ್ಮಾನಿಸಿತು. ಯುದ್ಧ ಮುಗಿದ ನಂತರ ಭಾರತೀಯರಿಗೆ ತಮ್ಮದೇ ಆದ ಸಂವಿಧಾನ ರಚಿಸಲು ಅವಕಾಶ ನೀಡುವುದೆಂದೂ, ಆದರೆ ಇದಕ್ಕೆ ಮೊದಲು ಮುಸಲ್ಮಾನರೊಡನೆ ಯೋಗ್ಯ ಒಪ್ಪಂದಕ್ಕೆ ಬರುವುದು ಅವಶ್ಯವೆಂದೂ ಸರಕಾರ ಪ್ರಕಟಿಸಿತು. ಗಾಂಧೀಜಿ ಇದಕ್ಕೆ ಒಪ್ಪದೆ 'ವೈಯಕ್ತಿಕ ಸತ್ಯಾಗ್ರಹ'ವನ್ನು ಪ್ರಾರಂಭಿಸಿದರು. ಪ್ರಥಮ ಸತ್ಯಾಗ್ರಹಿ ವಿನೋಬಾ ಭಾವೆಯವರ ಆದರ್ಶವನ್ನ ಅನುಸರಿಸಿ ಅನೇಕ ಸತ್ಯಾಗ್ರಹಿಗಳು ಸೆರೆಮನೆ ಸೇರಿದರು. ೧೯೪೧ರಲ್ಲಿ ಯುದ್ಧದಲ್ಲಿ ಪ್ರವೇಶಿಸಿದ ಜಪಾನ್ ೧೯೪೨ರಲ್ಲಿ ಅಂಡಮಾನ್ ದ್ವೀಪಗಳನ್ನು ವಶಪಡಿಸಿಕೊಂಡು, ವಿಶಾಖಪಟ್ಟಣ, ಕಾಕಿನಾಡಗಳ ಮೇಲೆ ಬಾಂಬು ಹಾಕಿತು. ಇದರಿಂದ ಆಂಗ್ಲರಿಗೆ ಭಾರತೀಯರ ಬೆಂಬಲ ಆವಶ್ಯಕವಾಯಿತು. ಗಾಂಧೀಜಿ ಸತ್ಯಾಗ್ರಹವನ್ನು ಹಿಂತೆಗೆದುಕೊಂಡರು. ಕಾಂಗ್ರೆಸ್ಸಿನ ಈ ವರ್ತನೆಯನ್ನು ಮೆಚ್ಚಿದ ಬ್ರಿಟಿಷ್ ಸರಕಾರ ಕಾಂಗ್ರೆಸ್ ಜೊತೆ ಸಂಧಾನ ನಡೆಸಲು ಕ್ರಿಪ್ಸ್‌ರನ್ನು ಭಾರತಕ್ಕೆ ಕಳುಹಿಸಿತು.

## ಕ್ರಿಪ್ಸ್ ಸಂಧಾನ

ಕ್ರಿಪ್ಸ್ ಹೊಸ ಸಲಹೆಗಳನ್ನೇನೋ ತಂದಿದ್ದರು. ಆದರೆ ಯುದ್ಧ ಮಧ್ಯದಲ್ಲಿ ಸಂವಿಧಾನದ ಬದಲಾವಣೆಗೆ ಬ್ರಿಟಿಷರು ಸಿದ್ಧರಿರಲಿಲ್ಲ. ಭಾರತಕ್ಕೆ ಕ್ಯಾಬಿನೆಟ್ ಪದ್ಧತಿಯ ಸರಕಾರ ನೀಡಲು, ಎಲ್ಲಾ ಅಧಿಕಾರಗಳನ್ನು ಕೂಡಲೇ ಬಿಟ್ಟು ಕೊಡಲು ನಿರಾಕರಿಸಿದರು. ಇದರಿಂದ ಅವರ ನಿಯೋಗ ಯಶಸ್ವಿಯಾಗಲಿಲ್ಲ. "ಇವೇ ಸಲಹೆಗಳನ್ನು ನೀವು ಮುಂದಿಡುವುದಾಗಿದ್ದರೆ ನೀವು ಏಕೆ ಬಂದಿರಿ ? ಭಾರತಕ್ಕೆ ನೀವು ನೀಡಲಿರುವ ಸುಧಾರಣೆಗಳು ಇವಿಷ್ಟೇ ಆದರೆ ಮುಂದಣ ವಿಮಾನವೇರಿ ನೀವು ಮರಳುವುದು ಒಳಿತೆಂದು ನಾನು ಸಲಹೆ ನೀಡಲು ಬಯಸುವೆ" ಎಂದು ಗಾಂಧೀಜಿ ಕ್ರಿಪ್ಸರಿಗೆ ತಿಳಿಸಿದರು! ಮುಸಲ್ಮಾನರೂ ಸಹ ಕ್ರಿಪ್ಸರ ಸಲಹೆಗಳಿಗೆ ಒಪ್ಪಲಿಲ್ಲ.

## " ತೊಲಗಿ ಭಾರತದಿಂದ! "

ಎಲ್ಲೆಲ್ಲಿಯೂ ನಿರಾಶೆ ಎದ್ದು ಕಾಣುತ್ತಿತ್ತು. ಆಂಗ್ಲರನ್ನು ಭಾರತದಿಂದ ಹೊರಡಿಸಿ ಓಡಿಸಬೇಕೆಂಬ ಉದ್ದೇಶದಿಂದ ಗಾಂಧೀಜಿಯ ನಾಯಕತ್ವದಲ್ಲಿ **"ತೊಲಗಿ ಭಾರತದಿಂದ"** (Quit India) ಚಳವಳಿ ಆಗಸ್ಟ್ ೮, ೧೯೪೭ ರಲ್ಲಿ ಆರಂಭವಾಯ್ತು. ಗಾಂಧೀಜಿ ಮೊದಲ್ಗೊಂಡು ಕಾಂಗ್ರೆಸ್ ಅಗ್ರಗಣ್ಯ ನಾಯಕರನ್ನು ಸೆರೆಹಿಡಿದುದು ಈ ಚಳವಳಿಗೆ ಹೆಚ್ಚು ಪ್ರಚೋದನೆ ನೀಡಿತು. ಇಡಿಯ ಭಾರತದಲ್ಲಿ ದಂಗೆಗಳುಂಟಾಗಿ ರೊಚ್ಚಿಗೆದ್ದ ಜನ, ಅಂಚೆ ತಂತಿ ಸಂಪರ್ಕ ಹಾಗೂ ರೈಲುಮಾರ್ಗಗಳನ್ನು ನಾಶಮಾಡಿದರು. ಲೂಟಿ-ಕೊಳ್ಳಿ, ಸರಕಾರಿ ಕಾಗದಪತ್ರಗಳ ನಾಶ ಈ ದಂಗೆಯ ಇನ್ನೊಂದು ಮುಖವಾಗಿತ್ತು. ವಿದ್ಯಾರ್ಥಿಗಳು ಶಾಲಾ-ಕಾಲೇಜುಗಳನ್ನು ಬಹಿಷ್ಕರಿಸಿ ಚಳವಳಿಗಳಲ್ಲಿ ಭಾಗ ವಹಿಸಿದರು. ಲಾಠೀಪ್ರಹಾರ ಹಾಗೂ ಗೋಳಿಬಾರು ಪ್ರಕರಣಗಳು ದೇಶದಾದ್ಯಂತ ನಡೆದವು. ಅನೇಕ ಜನರು ಆಸ್ತಿಯನ್ನು ಕಳೆದುಕೊಂಡರು. ಸಾವಿರಾರು ಜನ ಪ್ರಾಣ ತೆತ್ತರು. ಈ ಹಿಂಸಾಕೃತ್ಯಕ್ಕೆ ಗಾಂಧೀಜಿ ಮತ್ತು ಕಾಂಗ್ರೆಸ್ ಕಾರಣರೆಂಬ ಸರಕಾರದ ಹೇಳಿಕೆಯನ್ನು ಪ್ರತಿಭಟಿಸಲು ಗಾಂಧೀಜಿ ೧೯೪೩ರ ಫೆಬ್ರವರಿಯಲ್ಲಿ ೨೧ ದಿನಗಳ ಐತಿಹಾಸಿಕ ಉಪವಾಸ ವ್ರತವನ್ನು ಕೈಕೊಂಡರು!

## ಭಾರತ ರಾಷ್ಟ್ರೀಯ ಸೇನೆಯ ಆಕ್ರಮಣ

ಈ ನಡುವೆ, ನೇತಾಜಿ ಸುಭಾಷ್ ಚಂದ್ರ ಬೋಸ್ ಸಂಘಟಿಸಿದ 'ಇಂಡಿಯನ್ ನ್ಯಾಷನಲ್ ಆರ್ಮಿ' (ಭಾರತ ರಾಷ್ಟ್ರೀಯ ಸೈನ್ಯ) ಸಶಸ್ತ್ರ ಕ್ರಾಂತಿ ನಡೆಸಿ, ಭಾರತದ ಸುಮಾರು ೧೦,೦೦೦ ಚದರ ಮೈಲಿ ಭೂಮಿಯನ್ನು ವಶಪಡಿಸಿಕೊಂಡು ಬ್ರಿಟಿಷರನ್ನು ದಿಗ್ಭ್ರಾಂತರನ್ನಾಗಿ ಮಾಡಿತು.

೧೯೪೫ರ ಬ್ರಿಟನ್ನಿನ ಮಹಾ ಚುನಾವಣೆಯಲ್ಲಿ ಆರಿಸಿ ಬಂದ ಲೇಬರ್ ಪಕ್ಷವು ಸಂವಿಧಾನದ ಬಗ್ಗೆ ಚರ್ಚೆ ನಡೆಸಲು ಸಚಿವರ ನಿಯೋಗವೊಂದನ್ನು ೧೯೪೬ರಲ್ಲಿ ಕಳುಹಿಸಿತು. ಬ್ರಿಟಿಷ್ ಪ್ರಾಂತ್ಯಗಳು ಮತ್ತು ಆಶ್ರಿತ ಸಂಸ್ಥಾನಗಳನ್ನೊಳಗೊಂಡ ಸಂಯುಕ್ತ ಭಾರತ ಸರಕಾರದ ರಚನೆಗೆ ಈ ನಿಯೋಗ ಸಲಹೆ ಮಾಡಿತು. ಭಾರತಕ್ಕೆ ಅಗತ್ಯವಾದ ಸಂವಿಧಾನದ ರಚನೆಗಾಗಿ ಸಂವಿಧಾನ ಮಂಡಲಿಯನ್ನು ರಚಿಸಲು ಸಲಹೆ ಮಾಡಿತು.

## ದೇಶ ವಿಭಜನೆ

ಇದರ ಮೇರೆಗೆ ಸಂವಿಧಾನದ ರಚನೆಯ ಸಲುವಾಗಿ ೧೯೪೬ರಲ್ಲಿ ಚುನಾವಣೆ ನಡೆದು, ರಾಜ್ಯಾಂಗ ರಚನಾ ಸಮಿತಿಯಲ್ಲಿ ಕಾಂಗ್ರೆಸ್ ಬಹುಮತವನ್ನು ಗಳಿಸಿತು. ಮುಸ್ಲಿಂ ಲೀಗ್ ಮೊದಲು ನಿರಾಕರಿಸಿ, ಕೊನೆಯಲ್ಲಿ ಜವಹರ್ ಲಾಲ್ ನೆಹರೂ ಅವರು ರಚಿಸಿದ ಸರಕಾರವನ್ನು ಪ್ರವೇಶಿಸಿತು. ಪಾಕಿಸ್ತಾನವನ್ನು ಗಳಿಸಲು ನೇರ ಕ್ರಮ ಕೈಕೊಂಡು ದೇಶದಲ್ಲಿ ಅತ್ಯಾಚಾರ, ರಕ್ತಪಾತ, ಲೂಟಿ, ಸಾವು-ನೋವುಗಳಿಗೆ ದಾರಿ ಮಾಡಿಕೊಟ್ಟಿತು! ಇದನ್ನು 'ಅರಣ್ಯ ರಾಜಕೀಯ' ಎಂದು ನೆಹರೂ ಕರೆದರು. ೧೯೪೮ನೆಯ ಜೂನ್ ತಿಂಗಳೊಳಗಾಗಿ ಸ್ವಾತಂತ್ರ್ಯವನ್ನು ಕೊಟ್ಟು ಭಾರತವನ್ನು ಬಿಟ್ಟು ಹೋಗುವೆವು ಎಂದು ಬ್ರಿಟಿಷ್ ಪ್ರಧಾನಿ ಆಟ್ಲಿಯವರು ಫೆಬ್ರವರಿ ೨೦, ೧೯೪೭ರಂದು ಘೋಷಿಸಿದರು! ೧೯೪೭ರ ಮಾರ್ಚ್ ೨೪ರಂದು ಲಾರ್ಡ್ ಮೌಂಟ್‌ಬ್ಯಾಟನ್ ಭಾರತದ ವೈಸ್ರಾಯಿ ಆಗಿ ಬಂದರು. ಅವರು ಕಾಂಗ್ರೆಸ್ ಮತ್ತು ಲೀಗ್ ನಾಯಕರೊಡನೆ ಚರ್ಚಿಸಿ, ದೇಶದ ವಿಭಜನೆ ಅನಿವಾರ್ಯವೆಂಬುದನ್ನು ಕಂಡುಕೊಂಡರು. ತಮ್ಮ ಈ ನಿಲುವಿಗೆ ಕಾಂಗ್ರೆಸ್ ಮತ್ತು ಲೀಗ್ ನಾಯಕರನ್ನು ಒಪ್ಪಿಸಿ ವಿಭಜನೆಯ ಜಟಿಲ ಕಾರ್ಯಕ್ಕೆ ತೊಡಗಿದರು. ಕೊನೆಯವರೆಗೂ ಗಾಂಧೀಜಿ ದೇಶ ವಿಭಜನೆಗೆ ವಿರೋಧಿಗಳಾಗಿದ್ದರು.

## ಆಗಸ್ಟ್ ೧೫, ೧೯೪೭: ಸ್ವಾತಂತ್ರ್ಯ ದಿನ

ಮೌಂಟ್‌ಬ್ಯಾಟನ್ ಅವರ ಯೋಜನೆಯಂತೆ ಬೆಲೂಚಿಸ್ಥಾನ, ವಾಯುವ್ಯ ಸರಹದ್ದು ಪ್ರಾಂತ, ಸಿಂಧ್, ಪಶ್ಚಿಮ ಪಂಜಾಬು, ಪೂರ್ವ ಬಂಗಾಳ, ಅಸ್ಸಾಮಿನ ಸಿಲ್ಹೆಟ್ ಜಿಲ್ಲೆ ಈ ಪ್ರಾಂತಗಳು ಸೇರಿದ ಪಾಕಿಸ್ತಾನ ಜನ್ಮ ತಳೆಯಿತು. ಉಳಿದ ಪ್ರದೇಶಗಳೆಲ್ಲಾ ಭಾರತವಲ್ಲಿ ಉಳಿದವು. ಭಾರತದ ಸ್ವಾತಂತ್ರ್ಯ ಕಾನೂನನ್ನು ೧೯೪೭ರ ಜುಲೈ ೧೫ರಂದು ಬ್ರಿಟಿಷ್ ಪಾರ್ಲಿಮೆಂಟ್ ಅಂಗೀಕರಿಸಿತು. ಜುಲೈ ೧೮ರಂದು ಭಾರತವು ಇಬ್ಭಾಗವಾಗಿ, ಆಗಸ್ಟ್ ೧೫ರಂದು ಭಾರತ ಸ್ವತಂತ್ರವಾಯಿತು. ಇವರೊಂದಿಗೆ ಬ್ರಿಟಿಷ್ ಸಾಮ್ರಾಜ್ಯ ಕೊನೆಗೊಂಡಿತು.

## ರಾಷ್ಟ್ರಪಿತ ಗಾಂಧೀಜಿ

"ಗಾಂಧೀಜಿಯವರು ಭಾರತದ ರಾಜಕಾರಣಕ್ಕೆ 'ಸತ್ಯ'ವೆಂಬ ಗಂಗಾಸ್ನಾನವನ್ನು ಮಾಡಿಸಿ ರಾಜಕೀಯ ಕ್ಷೇತ್ರವನ್ನು ಧಾರ್ಮಿಕ ಕ್ಷೇತ್ರವನ್ನಾಗಿ ಪರಿವರ್ತನಗೊಳಿಸಿದರು. ಕಾಂಗ್ರೆಸ್ಸಿನ ಕಾರ್ಯಾಲಯಗಳು ಆಶ್ರಮಗಳಾದವು! ಕಾಂಗ್ರೆಸ್ಸಿನವರು ಸಾಧು-ಸಂತರಾದರು. ಅಹಿಂಸಾತ್ಮಕ ಅಸಹಕಾರ, ಶಾಸನೋಲ್ಲಂಘನ, ಸತ್ಯಾಗ್ರಹ, ಇವೇ ರಣಗೀತೆಗಳಾದವು ; ಧರ್ಮಯುದ್ಧದ ದಿವ್ಯಾಸ್ತ್ರಗಳಾದವು. ಅಮೇರಿಕದ ಕ್ರಾಂತಿ, ಫ್ರೆಂಚ್ ವಿಪ್ಲವ, ರಷ್ಯದ ಪ್ರಳಯ- ಈ ಮೂರರಿಂದಲೂ ರಕ್ತಪಾತ, ಪ್ರಾಣನಾಶ ಆಗಿದ್ದು ಪ್ರಪಂಚವು ಮಲಿನವಾಗಿದ್ದಿತು. ಆದರೆ ಭಾರತದ ಸ್ವಾತಂತ್ರ್ಯಕ್ರಾಂತಿ ಹಿಂದೆಂದೂ ಕೇಳದ, ಕಾಣದ, ಸತ್ಯಧ್ವಜದ ಅಡಿಯಲ್ಲಿ ನಡೆದ ಪವಿತ್ರ ಕ್ರಾಂತಿ! ಇಂತಹ ಕ್ರಾಂತಿಯ ಕಾರಣಪುರುಷ ಗಾಂಧೀಜಿ!" ಜನವರಿ ೩೦. ೧೯೪೮ರಲ್ಲಿ ಮತಾಂಧನೊಬ್ಬನ ಗುಂಡಿಗೆ ಗಾಂಧೀಜಿ ಬಲಿಯಾದರು! ಗಾಂಧೀಯುಗ ಈ ರೀತಿ ಕೊನೆಗೊಂಡಿತು. ಅವರು ಕಣ್ಮರೆಯಾದರೂ ಅವರ ಆದರ್ಶಗಳು ಇಂದೂ ಚಿರ

ವಾಗಿವೆ. ನಮ್ಮ ಬಾಳು ಬಂಗಾರವಾಗಲೆಂದು ಸದಾ ಆಶಿಸಿ, ಅನೇಕ ಕಷ್ಟಗಳನ್ನು ನಮಗಾಗಿ ಸಂತೋಷದಿಂದ ಅನುಭವಿಸಿ, 'ರಾಮರಾಜ್ಯ' ಸ್ಥಾಪನೆಯ ಆಸೆ ಹೊತ್ತು, ರಾಮನಾಮ ಜಪಿಸುತ್ತಾ ಮಡಿದ ಶಾಂತಿದೂತ ಬಾಪೂಜಿ ಅಮರರಾಗಿದ್ದಾರೆ! 'ರಾಷ್ಟ್ರಪಿತ'ರಾಗಿದ್ದಾರೆ !

## ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ

ಬ್ರಿಟಿಷರ ದಬ್ಬಾಳಿಕೆಯ ವಿರುದ್ಧವಾಗಿ ೧೮೫೭ರಲ್ಲಿ ಉತ್ತರ ಭಾರತದಲ್ಲಿ ನಡೆದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಪ್ರತಿಧ್ವನಿಗಳು ಕರ್ನಾಟಕದ ಸಂಸ್ಥಾನಗಳಲ್ಲೂ ಪಾಳೆಯಗಾರಿಕೆಗಳಲ್ಲೂ ಕೇಳಬಂದುವಷ್ಟೆ? ೧೮೫೭ಕ್ಕಿಂತ ಮುಂಚೆ,-ಸುಮಾರು ಮೂವತ್ತು ವರುಷಗಳ ಹಿಂದೆಯೇ ಬ್ರಿಟಿಷರನ್ನು ಹೊರ ದೂಡಲು ಯತ್ನಿಸಿದ ಕಿತ್ತೂರು ಚೆನ್ನಮ್ಮ ರಾಣಿ, ಭಾರತದ ಈ ಪ್ರಥಮ ಸ್ವಾತಂತ್ರ್ಯ ಯುದ್ಧದ ನಾಂದಿ ಹಾಡಿದ ಕರ್ನಾಟಕದ ವೀರ ಮಹಿಳೆ ಯೆಂಬುದೂ ಕನ್ನಡಿಗರಿಗೆ ತುಂಬ ಹೆಮ್ಮೆಯ ವಿಷಯವಾಗಿದೆ!

ಕರ್ನಾಟಕವು ಪ್ರಾಚೀನ ಕಾಲದಿಂದಲೂ ವೀರ-ಧೀರರ ನಾಡು; ಉಚ್ಚ ಸಂಸ್ಕೃತಿಯ ನೆಲೆವೀಡು. ಕನ್ನಡದ ಜನ ಸುಭಟರು, ಸುಸಂಸ್ಕೃತರು, ಅಭಿಮಾನಿಗಳು, ಅತ್ಯುಗ್ರರು, ವಿವೇಕಿಗಳು ಎಂದು ಮುಂತಾಗಿ ಕವಿರಾಜ ಮಾರ್ಗಕಾರ ಕೊಂಡಾಡಿದುದು ಸ್ವಾನುಭವದ ಸೂಕ್ತಿಯೇ ಆಗಿದೆ. ಈ ತೇಜಸ್ವೀ ಕನ್ನಡಿಗರೇ ಪ್ರಾಚೀನ ಕರ್ನಾಟಕದ ರಾಜ್ಯ-ಸಾಮ್ರಾಜ್ಯಗಳನ್ನು ಕಟ್ಟಿ ಬೆಳೆಸಿದರು; ಸಂಸ್ಕೃತಿಯ ಬೆಳಕನ್ನು ಹರಡಿದರು. ದೇಶದ ಸ್ವಾತಂತ್ರ್ಯಕ್ಕೆ ಧಕ್ಕೆ ತಗಲಿದಾಗ ಉಗ್ರವಾಗಿ ಪ್ರತಿಭಟಿಸಿದರು!

### ಸಂಸ್ಕೃತಿ ಪುನರುತ್ಥಾನ–ರಾಷ್ಟ್ರೀಯ ಪ್ರಜ್ಞೆ

೧೯ನೆಯ ಶತಕದಲ್ಲಿ ಬ್ರಹ್ಮಸಮಾಜ, ಪ್ರಾರ್ಥನಾ ಸಮಾಜ, ಥಿಯಾ ಸೊಫಿಕಲ್ ಸೊಸೈಟಿ, ಆರ್ಯ ಸಮಾಜ, ಶ್ರೀರಾಮಕೃಷ್ಣ ಮಿಶನ್–ಮುಂತಾದ ಸಂಸ್ಥೆಗಳ ಮೂಲಕ ನಡೆದಿದ್ದ ಪ್ರಾಚೀನ ಭಾರತ-ಸಂಸ್ಕೃತಿಯ ಪುನರುತ್ಥಾನದ ಆಂದೋಲನಗಳು ಕರ್ನಾಟಕದಲ್ಲಿ ತಮ್ಮ ಪ್ರಭಾವವನ್ನು ಹರಡಿದುದು

ಕಂಡುಬರುತ್ತಿದೆ. ಈ ಸಂಸ್ಕೃತಿ-ಪುನರುತ್ಥಾನದ ಪುರಸ್ಕರ್ತರ ಮುಂದಿದ್ದ ಅತಿ ದೊಡ್ಡ ಸಮಸ್ಯೆಯೆಂದರೆ,—ರಾಷ್ಟ್ರೀಯ ಪ್ರಜ್ಞೆಯ ಅಭಾವ. ೧೮೫೭ರ ಕ್ರಾಂತಿಯ ಕಾಳೆಗಗಳೆಲ್ಲವೂ ವಿಫಲಗೊಂಡವಷ್ಟೆ! ಭಾರತೀಯರಲ್ಲಿ ಅಂದು ನಿರ್ದಿಷ್ಟವಾದ ಸುಸ್ಪಷ್ಟವಾದ ರಾಷ್ಟ್ರೀಯ ಜಾಗೃತಿ ಇಲ್ಲದಿರುವುದೇ ಈ ಸೋಲಿಗೆ ಮೂಲ ಕಾರಣವಾಗಿತ್ತು. ಪ್ರಾಚೀನ ಭಾರತ ಸಂಸ್ಕೃತಿಯ ಮರೆವಿನಿಂದಲೇ ಭಾರತೀಯರಲ್ಲಿ ಪರಸ್ಪರ ದ್ವೇಷಾಸೂಯೆಗಳೂ ಮತ್ತು ಅಂತಃ ಕಲಹಗಳೂ ಬೆಳೆದು ಬ್ರಿಟಿಷರ ಗುಲಾಮಗಿರಿಯಲ್ಲಿ ದೇಶ ನರಳಬೇಕಾಗಿ ಬಂತು. ಭಾರತೀಯರು ತಮ್ಮ ಆಧ್ಯಾತ್ಮ ಸಂಸ್ಕೃತಿಯ ಸತ್ವವನ್ನು ಅರಿತು ಕೊಂಡಾಗಲೇ ಬ್ರಿಟಿಷರನ್ನು ಹೊಡೆದೋಡಿಸುವಲ್ಲಿ ಆತ್ಮ ವಿಶ್ವಾಸ ಹೊಂದುವವರಾಗಿದ್ದರು. ಈ ತಿಳಿವಳಿಕೆಯ ಸ್ಫೂರ್ತಿಯೇ ಸಂಸ್ಕೃತಿ ಪುನರುತ್ಥಾನದ ಮಹಾನಾಯಕರನ್ನು ಪ್ರಚೋದಿಸಿತ್ತು. ವಿದ್ಯಾವಂತರೂ ಸೂಕ್ಷ್ಮಮತಿಗಳೂ ಆಗಿದ್ದ ಕನ್ನಡಿಗರು ಉತ್ತರದಲ್ಲಿ ನಡೆದಿದ್ದ ಈ ಸಂಸ್ಕೃತಿ ಪುನರುತ್ಥಾನ ಚಳವಳಿಗಳನ್ನು ಅರ್ಥಮಾಡಿಕೊಂಡಿದ್ದರು. ಭಾರತ ಸಂಸ್ಕೃತಿ ಪುನರುತ್ಥಾನವೇ ರಾಷ್ಟ್ರೀಯ ಜಾಗೃತಿಗೆ ಮೂಲವೆಂದರಿತುಕೊಂಡರು. ಅಂತೆಯೇ ಶ್ರೀರಾಮಕೃಷ್ಣ ಪರಮಹಂಸರ ಆಧ್ಯಾತ್ಮ ಸಂದೇಶವನ್ನು ಹೊತ್ತು ತಂದಿದ್ದ ಸ್ವಾಮೀ ವಿವೇಕಾನಂದರನ್ನು ೧೮೯೨ರಲ್ಲೇ ಕನ್ನಡಿಗರು ಮೈಸೂರಿಗೆ ಆದರದಿಂದ ಬರಮಾಡಿಕೊಂಡರು. "ಎದ್ದೇಳು, ಎಚ್ಚರಾಗು,-ಗುರಿ ಮುಟ್ಟುವ ವರೆಗೆ ನಿಲ್ಲದೆ ಮುಂದುವರಿ"—ಎಂಬ ಅವರ ಸಿಂಹ ಗರ್ಜನೆಯ ರಹಸ್ಯವನ್ನು ಮನನ ಮಾಡಿಕೊಂಡರು. ಮೈಸೂರು-ಬೆಂಗಳೂರುಗಳಲ್ಲಿ ಶ್ರೀರಾಮಕೃಷ್ಣ ಮಠಗಳೂ ಶಾಲೆಗಳೂ ಸ್ಥಾಪಿತವಾದವು. ಅವರ ಗ್ರಂಥಗಳ ಆಳವಾದ ವ್ಯಾಸಂಗ-ವಿಮರ್ಶೆಗಳು ಆರಂಭವಾದವು.

## ವೀರರ ಪರಂಪರೆ

೧೯ನೆಯ ಶತಕದಲ್ಲಿ ಬ್ರಿಟಿಷರ ಕೈವಾಡದಿಂದ ಕರ್ನಾಟಕವು ಛಿದ್ರ ವಿಚ್ಛಿದ್ರವಾಗಿತ್ತು. ಬೇರೆ ಬೇರೆ ಪ್ರಾಂತಗಳಲ್ಲಿ ಹಂಚಿಹೋಗಿತ್ತು. ಹೀಗಿ

ದ್ದರೂ ಕನ್ನಡಿಗರ ನ್ಯಾಯನಿಷ್ಠುರತೆಗೂ ಪ್ರತಿಭಟನಾಶಕ್ತಿಗೂ ಚ್ಯುತಿಯಿರಲಿಲ್ಲ. ಕಿತ್ತೂರ ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ಮಂಗಳೂರ ಅಪರಂಪರ ಸ್ವಾಮಿ, ಹಲಗಲಿಯ ಬೇಡರು, ಸುರಪುರದ ವೆಂಕಟಪ್ಪನಾಯಕ, ನರಗುಂದದ ಬಾಬಾ ಸಾಹೇಬ, ಮುಂಡರಗಿಯ ಭೀಮರಾಯ-ಮುಂತಾದವರು ಬ್ರಿಟಿಷರೊಂದಿಗೆ ಹೋರಾಡಿ ವೀರಸ್ವರ್ಗ ಪಡೆದರಷ್ಟೆ ! ಇವರೆಲ್ಲರ ಸ್ವಾಭಿಮಾನ, ಸ್ವಾರ್ಥತ್ಯಾಗ, ದೇಶಪ್ರೇಮ, ಸಾಹಸಕಾರ್ಯಗಳು ಬಹುಕಾಲದವರೆಗೆ ಕನ್ನಡ ಜನತೆಯ ಮನೆಮಾತಾಗಿದ್ದವು. ಈ ವೀರರ ಕಥೆಗಳು ಹಾಡು-ಲಾವಣಿಗಳ ರೂಪದಲ್ಲಿ ಕನ್ನಡ ಜನತೆಯ ನಾಲಗೆಯ ಮೇಲೆ ನಲಿದಾಡುತ್ತಿದ್ದವು; ಜನತೆಗೆ ನಿರಂತರ ಸ್ಫೂರ್ತಿಯ ಬುಗ್ಗೆಗಳಾಗಿದ್ದವು !

## ರಾಷ್ಟ್ರೀಯ ಕಾಂಗ್ರೆಸ್ ಪ್ರಭಾವ

೧೮೮೫ರಲ್ಲಿ ಭಾರತದ ರಾಷ್ಟ್ರೀಯ ಕಾಂಗ್ರೆಸ್ ಸ್ಥಾಪನೆಯಾಯಿತಷ್ಟೆ ! ಅದರ ಬಗೆಗೆ ಉತ್ಸಾಹದ ಪ್ರತಿಕ್ರಿಯೆಗಳು ಕರ್ನಾಟಕದಲ್ಲೂ ಕಂಡು ಬಂದುದು ಸಹಜ. ಮುಂಬಯಿಯಲ್ಲಿ ಜರಗಿದ್ದ ೧೮೮೫ರ ಪ್ರಥಮ ಕಾಂಗ್ರೆಸ್ ಅಧಿವೇಶನಕ್ಕೆ ಹೋಗಿದ್ದ ಭಾರತದ ಒಟ್ಟು ೭೨ ಪ್ರತಿನಿಧಿಗಳಲ್ಲಿ ಕರ್ನಾಟಕದಿಂದ ಹೋಗಿದ್ದ ಬಳ್ಳಾರಿಯ ಕೋಲಾಚಲಂ ವೆಂಕಟರಾಯರು ಮತ್ತು ಕಾರವಾರದ ಚಂದಾವರಕರ್ ನಾರಾಯಣರಾಯರೂ ಪ್ರಮುಖರಾಗಿದ್ದರು. ಮುಂದೆ ೧೯೦೦ರಲ್ಲಿ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷಪದವು ಚಂದಾವರಕರ್ ನಾರಾಯಣರಾಯರಿಗೇ ದೊರೆತಾಗ ಕರ್ನಾಟಕದ ಕೀರ್ತಿಗೆ ಕಳಸವಿಟ್ಟಂತಾಯ್ತು ! ಹೀಗೆ ಕರ್ನಾಟಕವು ರಾಷ್ಟ್ರೀಯ ಕಾಂಗ್ರೆಸ್ಸಿನ ಇತಿಹಾಸದಲ್ಲಿ ಕ್ರಮೇಣ ಮುಂದುವರಿಯತೊಡಗಿತು.

ಆಗ ಉತ್ತರ ಕರ್ನಾಟಕದಲ್ಲಿ ಮರಾಠೀ ಮುಖಂಡರ ಪ್ರಭಾವವು ಹೆಚ್ಚಿತ್ತು. ಇದಕ್ಕೆ ಲೋಕಮಾನ್ಯ ತಿಲಕರ ಪ್ರಭಾವವೇ ವಿಶೇಷ ಕಾರಣವಾಗಿತ್ತು. ಅವರ ಮರಾಠೀ ವೃತ್ತಪತ್ರಿಕೆ 'ಕೇಸರಿ'ಯನ್ನು ಓದದ ಕನ್ನಡ

ವಿದ್ಯಾವಂತರೇ ಇರಲಿಲ್ಲ! ಆಗ ಉತ್ತರ ಕರ್ನಾಟಕದ ಮುಖ್ಯ ನಗರಗಳಲ್ಲಿ ವಕೀಲರು, ಡಾಕ್ಟರರು, ಪ್ರಾಧ್ಯಾಪಕರು, ಸರಕಾರೀ ಮಲಿಷ್ಕಾಧಿಕಾರಿಗಳು ವಿಶೇಷವಾಗಿ ಮರಾಠೀಯರೇ ಇರುತ್ತಿದ್ದರು. ಆಗ ಆ ಭಾಗದಲ್ಲಿ ಉಚ್ಚಶಿಕ್ಷಣದ ವ್ಯವಸ್ಥೆ ಇರಲಿಲ್ಲ. ವಿಶ್ವವಿದ್ಯಾಲಯದ ಪದವಿಗಳಿಗಾಗಿ ಪುಣೆ—ಮುಂಬಯಿಗಳಿಗೆ ಹೋಗಿ ಶಿಕ್ಷಣ ಪಡೆಯ ಬೇಕಾಗಿತ್ತು. ಇದರಿಂದ ಉತ್ತರ ಕರ್ನಾಟಕದಲ್ಲಿಯ ವಿಶ್ವ ವಿದ್ಯಾಲಯ ಪದವೀಧರ ಕನ್ನಡಿಗರಿಗೆಲ್ಲ ಮರಾಠೀ ಭಾಷೆಯ ರೂಢಿ ಚೆನ್ನಾಗಿತ್ತು. ಇದರೊಂದಿಗೆ ಈ ಭಾಗದ ಕನ್ನಡಿಗರ ರಾಷ್ಟ್ರೀಯ ವಿಚಾರಗಳ ಉಗಮಸ್ಥಾನವೂ ಸ್ವಾಭಾವಿಕವಾಗಿ ಪುಣೆನಗರವೇ ಆಗಿತ್ತು. ಕರ್ನಾಟಕದ ರಾಜಕೀಯ ಚಟುವಟಿಕೆಗಳಿಗೆಲ್ಲ ಲೋಕಮಾನ್ಯ ತಿಲಕರೇ ಸ್ಫೂರ್ತಿಯ ಕೇಂದ್ರವಾಗಿದ್ದರು. ಲೋಕಮಾನ್ಯರ ಪ್ರಭಾವಲಯದಲ್ಲಿ ಬಂದ ಅಂದಿನ ಕರ್ನಾಟಕದ ರಾಜಕೀಯ ಮುಖಂಡರಲ್ಲಿ—ಗಂಗಾಧರರಾವ್ ದೇಶಪಾಂಡೆ, ಆಲೂರ ವೆಂಕಟರಾಯರು, ಕಡಪಾ ರಾಘವೇಂದ್ರರಾಯರು, ಮೊದಲಾದವರು ಮುಖ್ಯರು. ಆಗ ಲೋಕಮಾನ್ಯ ತಿಲಕರು ಬರಿ ಮಹಾರಾಷ್ಟ್ರದ ನಾಯಕರಾಗಿರದೆ ಅಖಿಲ ಭಾರತದ ಮಹಾನಾಯಕರೆನಿಸಿದ್ದರು. ಭಾರತದ ರಾಜಕೀಯ ಪ್ರಪಂಚದ ಯಾವುದೇ ದೊಡ್ಡ ಘಟನೆ ಎಲ್ಲಿಯೋ ನಡೆದರೂ ಅದರ ತೀವ್ರ ಪ್ರತಿಕ್ರಿಯೆ ಕರ್ನಾಟಕದಲ್ಲಿ ಕೂಡಲೇ ವ್ಯಕ್ತವಾಗುವಷ್ಟು ಮುಂಬಯಿ ಕರ್ನಾಟಕವು ಜಾಗೃತವಿತ್ತು. ಇನ್ನೊಂದು ವಿಶೇಷವೆಂದರೆ ಆಗಿನ ರಾಜಕೀಯ ಜಾಗೃತಿ ವಿಶ್ವವಿದ್ಯಾಲಯದ ಪದವೀಧರರ ವರ್ಗಕ್ಕೆ ಮಾತ್ರ ಸೀಮಿತವಾಗಿತ್ತು. ಸಾಮಾನ್ಯ ಜನಸಮುದಾಯವಿನ್ನೂ ಕತ್ತಲಲ್ಲೇ ಇತ್ತು.

## ಸ್ವದೇಶೀ ಚಳವಳಿ

೧೯೦೫—೦೬ರ ಸುಮಾರಿಗೆ ಉತ್ತರದಲ್ಲಿ 'ವಂಗ-ಭಂಗ' ಚಳವಳಿ ಮತ್ತು ಸ್ವದೇಶೀ ಚಳವಳಿಗಳು ಆರಂಭವಾದವು. ಇದರ ಪರಿಣಾಮವಾಗಿ ಸ್ವದೇಶೀ ಚಳವಳಿ ಕರ್ನಾಟಕದಲ್ಲಿ ಹೆಚ್ಚಿತು. ಧಾರವಾಡ, ಹುಬ್ಬಳ್ಳಿ, ನವಲಗುಂದ,

ಬಾಗಲಕೋಟೆ, ನರಗುಂದ, ಆಗಡಿ, ಹಾಗಲ್ಲು—ಮುಂತಾದ ಸ್ಥಳಗಳಲ್ಲಿ ರಾಷ್ಟ್ರೀಯ ಶಾಲೆಗಳು ಸ್ಥಾಪಿತವಾದವು. ವಿದೇಶೀ ಬಟ್ಟೆಗಳನ್ನು ಕಲೆಹಾಕಿ ಸಾರ್ವಜನಿಕವಾಗಿ ಬೆಂಕಿ ಹಚ್ಚಿ ನಾಶಮಾಡುವ ಚಟುವಟಿಕೆಗಳೂ ನಡೆದವು.

## ತೀವ್ರಗಾಮಿಗಳತ್ತ ಒಲವು

೧೯೦೭ರಲ್ಲಿ ನಡೆದ ಸೂರತ್ ಕಾಂಗ್ರೆಸ್ ಅಧಿವೇಶನಕ್ಕೆ ತಿಲಕರ ಶಿಷ್ಯರಾಗಿದ್ದ ಅನೇಕ ಜನ ಕನ್ನಡಿಗರು ಕರ್ನಾಟಕದ ಪ್ರತಿನಿಧಿಗಳಾಗಿ ಹೋಗಿದ್ದರು. ಅವರಲ್ಲಿ ಆಲೂರ ವೆಂಕಟರಾಯರು, ಶ್ರೀನಿವಾಸರಾವ್ ಕೌಜಲಗಿಯವರು ಮುಖ್ಯರಾಗಿದ್ದರು. ಅಲ್ಲಿ ಲೋಕಮಾನ್ಯ ತಿಲಕರೂ ಶ್ರೀಅರವಿಂದಘೋಷರೂ ತೀವ್ರಗಾಮಿಗಳ ಪರವಾಗಿ ವಾದಿಸುತ್ತಿದ್ದು, ಕನ್ನಡಿಗರ ಹೃದಯಗಳನ್ನು ಅವರೇ ಗೆದ್ದಿದ್ದರು. ಅರವತ್ತು ವರುಷಗಳ ಪೂರ್ವದಲ್ಲೇ ರಾಜಕೀಯದಲ್ಲಿ ಕರ್ನಾಟಕದ ಒಲವು ಹೇಗೆ ಪ್ರಗತಿ ಪರವೂ ಕ್ರಾಂತಿಪರವೂ ಆಗಿತ್ತೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

೧೯೦೮ರಲ್ಲಿ ಲೋಕಮಾನ್ಯತಿಲಕರನ್ನು ಮಂಡಾಲೆಯ ಕಾರಾಗೃಹಕ್ಕೆ ಕಳಿಸಿದಾಗ ಕನ್ನಡಿಗರ ಹೃದಯಗಳು ತಲ್ಲಣಿಸಿದವು. ಮುಂದೆ ೧೯೧೪ರಲ್ಲಿ ತಿಲಕರ ಬಿಡುಗಡೆಯಾದಾಗ ಅವರ ನೇತೃತ್ವದಲ್ಲಿ ನಡೆಯುತ್ತಿದ್ದ ರಾಜಕೀಯ ಘಟನೆಗಳನ್ನು ಅಂದಿನ ಕನ್ನಡ ಜನ ನಾಯಕರು ಅತ್ಯುತ್ಸಾಹದಿಂದ ಗಮನಿಸುತ್ತಿದ್ದರು. ಲೋಕಮಾನ್ಯರ ಆದೇಶಗಳಿಗಾಗಿ ಹಾತೊರೆದು ದಾರಿ ಕಾಯುತ್ತಿದ್ದರು. ತಿಲಕರ ಪ್ರಭಾವದಿಂದ ೧೯೧೪ರಲ್ಲಿ ಕರ್ನಾಟಕದಲ್ಲೂ ತೀವ್ರಗಾಮಿ ಮಿತಗಾಮಿಗಳೆಂಬ ಎರಡು ಗುಂಪುಗಳು ತಲೆದೋರಿದವು. ಇದೇ ಸುಮಾರಿಗೆ ಆನಿಬೆಸೆಂಟ್ ಅವರ "ಹೋಂ ರೂಲ್" ಚಳವಳಿ ಆರಂಭವಾದಾಗ ಲೋಕಮಾನ್ಯರೂ ಅದನ್ನು ಬೆಂಬಲಿಸಿದ್ದರು. ಈ ಕಾರಣದಿಂದ ಕನ್ನಡಿಗರಲ್ಲೂ "ಹೋಂ ರೂಲ್" ಚಳವಳಿ ಆರಂಭವಾಯ್ತು.

# ಏಕೀಕೃತ ಕರ್ನಾಟಕದ ಗುರಿ

ಇದೇ ಸುಮಾರಿಗೆ ಕರ್ನಾಟಕದ ರಾಜಕೀಯದಲ್ಲಿ ಇತಿಹಾಸ-ಸಂಸ್ಕೃತಿಗಳ ಪ್ರಜ್ಞೆಯೊಂದು ಜಾಗೃತವಾದುದು ಒಂದು ಮಹತ್ವದ ಅಂಶ. ಇಪ್ಪತ್ತು ತುಂಡುಗಳಲ್ಲಿ ಒಡೆದು ಹೋಗಿದ್ದ ಕರ್ನಾಟಕವನ್ನು ಒಂದುಗೂಡಿಸುವ ಪ್ರೇರಣೆಯನ್ನು ಕನ್ನಡಿಗರು 'ವಂಗ-ಭಂಗ ಚಳವಳಿ'ಯಿಂದಲೇ ಪಡೆದಿದ್ದರು. ಈ ಕ್ರಾಂತಿಯ ಜಾಗೃತಿಯ ಪರಿಣಾಮವಾಗಿ ೧೯೨೦ರಲ್ಲಿ 'ಪ್ರಥಮ ಕರ್ನಾಟಕ ಸಮ್ಮೇಳನ' ಸೇರಿತು. ಕರ್ನಾಟಕ ಏಕೀಕರಣವೇ ಅದರ ಗುರಿಯಾಗಿತ್ತು. ಆಲೂರ ವೆಂಕಟರಾಯರು, ಕಡಪಾ ರಾಘವೇಂದ್ರರಾಯರು, ಮುದವೀಡು ಕೃಷ್ಣರಾಯರು ಈ ಏಕೀಕರಣದ ಪುರಸ್ಕರ್ತರಾಗಿದ್ದರು. ಜಾತಿ, ಮತ, ರಾಜಕೀಯ ಪಕ್ಷಭೇದ ಮುಂತಾದವುಗಳಿಗೆ ಎಷ್ಟೂ ಅವಕಾಶಕೊಡದೆ ಏಕೀಕೃತ ಕರ್ನಾಟಕವನ್ನು ಸ್ಥಾಪಿಸುವುದೇ ಕನ್ನಡಿಗರ ಸಂಕಲ್ಪವಾಗಿತ್ತು. 'ಭಾರತಮಾತಾ ಕೀ ಜೈ' ಘೋಷಣೆಯೊಂದಿಗೆ 'ಕರ್ನಾಟಕ ಮಾತಾಕೀ ಜೈ' ಘೋಷಣೆಯು ಸೇರಿಕೊಂಡು ಕನ್ನಡಿಗರಲ್ಲಿ ಹೊಸದೊಂದು ಚೈತನ್ಯ ಸ್ಫುರಿಸಿತು. ಈ ಕಾಲದಲ್ಲಿ ಅಖಿಲ ಭಾರತದ ರಾಷ್ಟ್ರೀಯ ರಾಜಕಾರಣದೊಂದಿಗೆ ಕರ್ನಾಟಕ ಏಕೀಕರಣದಂಥ ಪ್ರಾಂತೀಯ ರಾಜಕಾರಣವನ್ನು ಬೆರಸುವುದು ಸರಿಯೋ ಎಂಬ ಮಾತೂ ಅಲ್ಲಲ್ಲಿ ಕೇಳಬರುತ್ತಿತ್ತು. ಪ್ರಾಂತವಾದ-ರಾಷ್ಟ್ರವಾದಗಳೆರಡೂ ಪರಸ್ಪರ ಪೂರಕಗಳಲ್ಲದೆ ವಿರೋಧಕಗಳಲ್ಲವೆಂಬುದು ಬಹುಜನ ಕನ್ನಡಿಗರ ಮತವಾಗಿತ್ತು. ಕರ್ನಾಟಕ ಏಕೀಕರಣದ ಪ್ರಮುಖ ಪುರಸ್ಕರ್ತರಾಗಿದ್ದ ಆಲೂರ ವೆಂಕಟರಾಯರು ಈ ವಾದಕ್ಕೆ ಸಮರ್ಪಕ ಉತ್ತರಕೊಡುತ್ತಿದ್ದರು. "ಕರ್ನಾಟಕಾಂತರ್ಗತ ಭಾರತಮಾತೆಗೆ ನಮಸ್ಕಾರ" ಎಂಬುದೇ ಆಲೂರರ ಉತ್ತರವಾಗಿತ್ತು. ಅವರ ಈ ಉಕ್ತಿ ಕನ್ನಡಿಗರ ಹೃದಯಕ್ಕೆ ಮುಟ್ಟಿದ ಸೂಕ್ತಿ ಎನಿಸಿತು.

## ಗಾಂಧೀವಾದ : ಹೊಸ ರಾಜಕೀಯ ಪ್ರಜ್ಞೆ

ಮಹಾತ್ಮಾ ಗಾಂಧೀಜಿ ಭಾರತದ ರಾಜಕಾರಣ ಪ್ರಪಂಚದಲ್ಲಿ ಕಾಣಿಸಿಕೊಂಡಾಗ ಕರ್ನಾಟಕದಲ್ಲೂ 'ಗಾಂಧೀವಾದ'ದ ಹೊಸದೊಂದು ಬಿರುಗಾಳಿಯೇ ಬೀಸಿತು! ಗಾಂಧಿವಾದದ ವಿಶೇಷವೆಂದರೆ,–ಅದು ಸಾಮಾನ್ಯ ಜನತೆಯ ಹೃದಯಗಳನ್ನು ಮೊಟ್ಟ ಮೊದಲು ತಟ್ಟಿದುದು. ಲೋಕಮಾನ್ಯರ ವಿಚಾರಸರಣಿ ಆಂಗ್ಲ ವಿದ್ಯಾಪದವೀಧರರನ್ನು ಆಕರ್ಷಿಸುತ್ತಿದ್ದರೆ ಗಾಂಧೀವಾದವು ಸರ್ವಸಾಮಾನ್ಯ ಜನಕೋಟಿಯ ಹೃದಯಗಳನ್ನೇ ಗೆದ್ದಿತು! ರೈತರು ಹಾಗೂ ಕೂಲಿಕಾರರು ಇಷ್ಟು ದಿನ ರಾಜಕೀಯದಿಂದ ದೂರ ಸಿಡಿದು ನಿಂತಿದ್ದರು. ಅವರೀಗ ಗಾಂಧೀಜಿಯ ಕರೆಗೆ ಓಗೊಡಲಾರಂಭಿಸಿದರು. ತೀರ ಸಾಮಾನ್ಯರ ದೃಷ್ಟಿಯಲ್ಲಿ ಗಾಂಧೀಜಿ ಕೇವಲ ಒಬ್ಬ ರಾಜಕಾರಣಿಯಾಗಿರಲಿಲ್ಲ, ಶುದ್ಧ ನೈತಿಕ, ಆಚರಣೆ, ಧರ್ಮ–ಧರ್ಮ ಶ್ರದ್ಧೆ, ದೇವರಲ್ಲಿದ್ದ ಅಪಾರ ನಂಬುಗೆ–ಇವುಗಳಿಂದ ಗಾಂಧೀಜಿ ಒಬ್ಬ ಮಹಾನ್ ಸಾಧು–ಸಂತರೆನಿಸಿದ್ದರು. ಆದ ಕಾರಣ ನೈತಿಕ ಧಾರ್ಮಿಕ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿದ್ದ ಕನ್ನಡ ಜನ ಗಾಂಧೀಜಿಯವರ ಬಗ್ಗೆ ಅಪಾರ ಭಕ್ತಿಯನ್ನು ತಳೆದಿದ್ದಿತು. ಹೀಗೆ ಇಪ್ಪತ್ತನೆಯ ಶತಕದ ೨ನೆಯ ದಶಕದಲ್ಲಿ ಹೊಸ ರಾಜಕೀಯ ಪ್ರಜ್ಞೆಯೊಂದು ಕನ್ನಡ ಹಳ್ಳಿಗಳಲ್ಲೆಲ್ಲಾ ಉದಯವಾಯ್ತು.

ಹೀಗೆ ಗಾಂಧೀಜಿ ಆರಂಭಿಸಿದ ಅಸಹಕಾರ ಚಳವಳಿ ಸಕಲರನ್ನೂ ಗಾಢವಾಗಿ ವ್ಯಾಪಿಸಿತು. ಈ ಚಳವಳಿಯ ಕಾಲದಲ್ಲೂ ಕರ್ನಾಟಕದ ರಾಜಕೀಯ ಮುಖಂಡರು ಹೆಚ್ಚಾಗಿ ಆಂಗ್ಲ ವಿದ್ಯಾ ಪದವೀಧರವರ್ಗಗಳಿಂದಲೇ ಹೊರಬಂದರು. ಈಗ ಹೊಸದಾಗಿ ಬೆಳಕಿಗೆ ಬಂದು ಸುಪ್ರಸಿದ್ಧರಾದ ಕರ್ನಾಟಕದ ನಾಯಕರೆಂದರೆ, ಇಂದು ಗಾಂಧೀ ಸ್ಮಾರಕ ನಿಧಿಯ ಅಧ್ಯಕ್ಷರಾಗಿರುವ ಶ್ರೀ ರಂಗನಾಥ ದಿವಾಕರರು, ಭಾರತ ಸೇವಾದಲ ಸಂಸ್ಥಾಪಕ ಡಾ. ಎನ್. ಎಸ್. ಹರ್ಡೀಕರರು, ಮುಂತಾದವರು. ಇವರು ದೇಶಸೇವೆಗಾಗಿ ಸರ್ವಸ್ವವನ್ನು ತ್ಯಾಗಮಾಡಲು ಸಿದ್ಧರಾದವರು. ಅಸಹಕಾರ ಚಳವಳಿಯಲ್ಲಿ ಹಲವು ವಕೀಲರು ಕೋರ್ಟು

ಗಳಿಗೆ ಶರಣು ಹೊಡೆದರು. ಅನೇಕ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳು ಸ್ಥಾಪನೆ ಗೊಂಡವು. ಗಾಂಧೀ ಯುಗದಲ್ಲಿ ಸೆರೆಮನೆಗೆ ಹೋಗುವುದೆಂದರೆ ಅದೊಂದು ಅತ್ಯುಚ್ಚಗೌರವದ ಮಾತಾಯ್ತು. ಸೆರೆಮನೆಯ ಅಂಜಿಕೆಯನ್ನೇ ಗಾಂಧೀಜಿ ಕತ್ತರಿಸಿ ಹಾಕಿದರು.

## ಕರ್ನಾಟಕ ಪ್ರದೇಶ ಕಾಂಗ್ರೆಸ್ ಕಮಿಟಿ

ಗಾಂಧೀಯುಗದಲ್ಲಿ ಕರ್ನಾಟಕವು ಗಾಂಧೀಜಿಯ ಹೆಜ್ಜೆಯಲ್ಲಿ ಹೆಜ್ಜೆ ಯಿಟ್ಟು ಸಾಗಿತು. ಈ ಕಾಲದಲ್ಲಿ ನಡೆದ ಒಂದು ವಿಶೇಷ ಸಂಗತಿಯೆಂದರೆ,- ಕಾಂಗ್ರೆಸ್ಸಿನ ಸಂವಿಧಾನದಲ್ಲಿ ಕರ್ನಾಟಕಕ್ಕೆ ಒಂದು ಪ್ರತ್ಯೇಕ ಹಾಗೂ ಸ್ವತಂತ್ರ ಸ್ಥಾನ ದೊರೆತುದು. 'ಕರ್ನಾಟಕ ಪ್ರದೇಶ ಕಾಂಗ್ರೆಸ್ ಕಮಿಟಿ' ಎಂಬ ಕಾಂಗ್ರೆಸ್ ಹೊಸ ಶಾಖೆಯಿಂದ ಕರ್ನಾಟಕದಲ್ಲಿ ಅಖಿಲ ಭಾರತ ರಾಜಕೀ ಯಕ್ಕೆ ಹೆಚ್ಚಿನ ಪುಷ್ಟಿ ದೊರೆಯಿತಲ್ಲದೆ, ಕರ್ನಾಟಕ ಪ್ರದೇಶ ಕಾಂಗ್ರೆಸ್ ಕಮಿಟಿಯ ವ್ಯಾಪ್ತಿಗೆ ಬಳ್ಳಾರಿ, ಮಂಗಳೂರು, ಮೈಸೂರು, ಕೊಡಗು ಮುಂತಾದವು ಸೇರ್ಪಡೆಗೊಂಡವು. ಈಗ ಧಾರವಾಡವೇ ಉತ್ತರ ಕರ್ನಾಟಕ ದಲ್ಲಿ ಅಖಿಲ ಕರ್ನಾಟಕ ರಾಜಕಾರಣದ ಕೇಂದ್ರ ಸ್ಥಳವಾಯ್ತು.

## ಭಾರತೀಯತ್ವ – ಕರ್ನಾಟಕತ್ವಗಳ ಸಂಗಮ

೧೯೨೦ ರಿಂದ ೧೯೪೭ರ ವರೆಗಿನ ಕಾಲಾವಧಿ ಆಧುನಿಕ ಕರ್ನಾಟಕ ಚರಿತ್ರೆಯ ಒಂದು ಮಹತ್ವದ ಘಟ್ಟವಾಗಿದೆ. ಕರ್ನಾಟಕದಲ್ಲಿ ನಿಜವಾದ ರಾಜಕೀಯ ಹಾಗೂ ಸಾಂಸ್ಕೃತಿಕ ಪುನರುತ್ಥಾನವಾದುದು ಇದೇ ಅವಧಿ ಯಲ್ಲಿ. ಕರ್ನಾಟಕ ವಿದ್ಯಾವರ್ಧಕ ಸಂಘ, ಕರ್ನಾಟಕ ಸಾಹಿತ್ಯ ಪರಿಷತ್ತು ಮುಂ ತಾದ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಸಂಸ್ಥೆಗಳ ಸ್ಫೂರ್ತಿಯಿಂದ ಕನ್ನಡ ಭಾಷೆ, ಕನ್ನಡ ಸಾಹಿತ್ಯ, ಕನ್ನಡ ಸಂಸ್ಕೃತಿ, ಕನ್ನಡ ಕಲೆಗಳು – ಇತ್ಯಾದಿಗಳ ಆಳ

ವಾದ ವ್ಯಾಸಂಗಕಾರ್ಯ ರಭಸದಿಂದ ನಡೆಯಿತು. ಈಗ ಕನ್ನಡಿಗರು ರಾಷ್ಟ್ರೀಯ ಆಂದೋಲನದಲ್ಲಿ ಭಾಗವಹಿಸುತ್ತಲೇ ಕನ್ನಡ ಸಂಸ್ಕೃತಿಮಂದಿರ ವನ್ನು ಕಟ್ಟುವ ಕಾರ್ಯದಲ್ಲಿ ತೊಡಗಿದರು. ಆಲೂರ ವೆಂಕಟರಾಯರ 'ಕರ್ನಾಟಕತ್ವ'ದ ಮಂತ್ರವನ್ನು ಮನನ ಮಾಡಿಕೊಳ್ಳತೊಡಗಿದರು. ಈಗ ಕರ್ನಾಟಕದಲ್ಲಿ ಭಾರತೀಯತ್ವ-ಕರ್ನಾಟಕತ್ವಗಳೆರಡೂ ಗಂಗಾ-ಯಮುನೆಗಳ ಸಂಗಮ ಪ್ರವಾಹದಂತೆ ಕಲೆತು ಸಮರಸಗೊಂಡವು !

## ಉಪ್ಪಿನ ಸತ್ಯಾಗ್ರಹ

೧೯೩೦ರಲ್ಲಿ ನಡೆದ ಉಪ್ಪಿನ ಸತ್ಯಾಗ್ರಹ ಕರ್ನಾಟದಲ್ಲಿ ವಿಲಕ್ಷಣ ಯಶಸ್ಸು ಪಡೆಯಿತು. ಹಿಂದುಸ್ತಾನ ಸೇವಾದಲದ ಮೂರು ತಂಡಗಳೊಡನೆ ಇನ್ನಿತರ ತಂಡಗಳು ಸೇರಿ, ಅಂಕೋಲೆಯ ಸಮುದ್ರ ತೀರಕ್ಕೆ ಕನ್ನಡ ಸತ್ಯಾಗ್ರಹಿಗಳು ಹೊರಟರು. ಉಪ್ಪಿನ ಕಾಯಿದೆಯನ್ನು ಭಂಗಗೊಳಿಸಿದರು. ಶಾಂತ ಹಾಗೂ ಅಹಿಂಸಾಮಯವಾದ ಈ ಸ್ವಯಂಸೇವಕರು ತಯಾರಿಸಿದ್ದ ಉಪ್ಪನ್ನು ಅಂಕೋಲೆಯ ಪೇಟೆಯಲ್ಲಿ ಮಾರಾಟಮಾಡಲಾಯ್ತು. ಇತ್ತ ಗಾಂಧೀಜಿಯವರ ಐತಿಹಾಸಿಕ ' ದಾಂಡೀ ಯಾತ್ರೆ'ಯಲ್ಲಿ ಅನಂತರ-ಕನ್ನಡದ ಹುತಾತ್ಮರಾದ—ಮಹದೇವಪ್ಪ ಮೈಲಾರರು ಭಾಗವಹಿಸಿ ಕರ್ನಾಟಕದ ಕೀರ್ತಿಗೆ ಅಖಿಲ ಭಾರತದ ಹಂತವನ್ನು ತಂದುಕೊಟ್ಟರು !

## ಕಾನೂನು ಭಂಗ

ಕಾನೂನು ಭಂಗ ಚಳವಳಿಯಲ್ಲಿ ಈಚಲ ಮರಗಳನ್ನು ಕಡಿಯುವುದು ಒಂದಾಗಿತ್ತು. ನೂರಾರು ಹಳ್ಳಿಗಳಿಂದ ಸಹಸ್ರಾರು ಜನ ಹಳ್ಳಿಗರು ಕೂಡಿಕೊಂಡು ಅಸಂಖ್ಯ ಈಚಲ ಮರಗಳನ್ನು ಧ್ವಂಸಗೊಳಿಸಿದರು. ಅಸಂಖ್ಯ ತರುಣ ವಿದ್ಯಾರ್ಥಿಗಳು ಈ ಚಳವಳಿಯಲ್ಲಿ ದೊಡ್ಡ ಪ್ರಮಾಣದಲ್ಲಿ ಮುಂದೆ

ಬಂದರು. ಆಗ ರಾಜಕೀಯವನ್ನು ಸೇರಿದ ಅನೇಕರು ಇಂದು ಪ್ರಮುಖ ರಾಜಕೀಯ ಮುಖಂಡರಾಗಿ ಪ್ರಸಿದ್ಧಿ ಪಡೆದಿದ್ದಾರೆ. ಇಂದಿನ ಕರ್ನಾಟಕ ರಾಜ್ಯವನ್ನು ಸರ್ವಾಂಗೀಣವಾಗಿ ಕಟ್ಟುವಲ್ಲಿ ಅಮೋಘವಾಗಿ ಶ್ರಮಿಸುತ್ತಿದ್ದಾರೆ.

೧೯೩೦ರ ಉಪ್ಪಿನ ಸತ್ಯಾಗ್ರಹ ಮತ್ತು ಅನಂತರದ ೧೯೩೨ರ ಸ್ವಾತಂತ್ರ್ಯ ಹೋರಾಟ—ಇವು ಸಹಸ್ರಾರು ಕನ್ನಡ ಯುವಕರನ್ನು ಸೆರೆಮನೆಗೆ ಕಳಿಸಿದವು. ಸಣ್ಣಪುಟ್ಟ ಹಳ್ಳಿ ಪಟ್ಟಣಗಳಲ್ಲೂ ಕಾನೂನು ಭಂಗ ಚಳವಳಿ ವ್ಯಾಪಕವಾಗಿ ಹಬ್ಬಿತು. ಆಗ ನಡೆಯುತ್ತಿದ್ದ ಪ್ರಭಾತಫೇರೀ ಮೆರವಣಿಗೆಗಳು, ಅವುಗಳ ಮೇಲೆ ಆಗಾಗ ಬೀಳುತ್ತಿದ್ದ ಪೋಲೀಸರ ಲಾಠೀ ಪೆಟ್ಟುಗಳು, ಕಣ್ಣೀರು ತರಿಸುವ ವಿಷಗಾಳಿಯ ಪ್ರಯೋಗಗಳು ನಿತ್ಯದ ದೃಶ್ಯಗಳಾಗಿದ್ದವು. ಸತ್ಯಾಗ್ರಹಿಗಳು ಪ್ರದರ್ಶಿಸುತ್ತಿದ್ದ ಆತ್ಮಸಂಯಮ ಅಪ್ರತಿಮ; ಕಷ್ಟ-ಸಂಕಷ್ಟಗಳಲ್ಲೂ ಪಡೆಯುತ್ತಿದ್ದ ಆನಂದ ಅಮಿತ. ಹಿಂಡಲಗಿ, ಕಾರವಾರ, ಬಿಜಾಪುರ, ವಿಸಾಪೂರ್ ಸೆರೆಮನೆಗಳಲ್ಲಿ ಈ ಕಾಲದಲ್ಲಿ ಕಿಕ್ಕಿರಿದು ತುಂಬಿದ್ದ ರಾಜಕೀಯ ಕೈದಿಗಳು ಸಕಲರ ಗೌರವಾದರಗಳಿಗೆ ಪಾತ್ರರಾಗುತ್ತಿದ್ದರು.

## ಕರನಿರಾಕರಣೆ

ಉತ್ತರ ಕನ್ನಡ ಜಿಲ್ಲೆಯ ಸತ್ಯಾಗ್ರಹಿಗಳು ಮಾಡಿದ ಕಾನೂನು ಭಂಗ ಚಳವಳಿ ಎಂದೂ ಮರೆಯದಂಥದು. ಅವರು ಕೈಕೊಂಡಿದ್ದುದು ಕರನಿರಾಕರಣೆ ಚಳವಳಿ. ೧೯೩೦ರಲ್ಲಿ ಸಿರ್ಸಿ-ಸಿದ್ದಾಪುರಗಳಲ್ಲಿಯ ರೈತರು ಭೂಕಂದಾಯ ಕೊಡಲಾಗದ್ದಕ್ಕೆ ಕರನಿರಾಕರಣೆ ಚಳವಳಿಯನ್ನು ಕೈಕೊಂಡಿದ್ದರೆ, ಅಂಕೋಲೆಯ ಜನ ಕಾನೂನುಭಂಗಕ್ಕಾಗಿಯೇ ಕರನಿರಾಕರಣೆಯನ್ನು ಆರಂಭಿಸಿದರು. ಈ ತಾಲ್ಲೂಕುಗಳ ಬಡ ರೈತರು ಅನುಭವಿಸಿದ ಯಾತನೆ ಹೇಳತೀರದ್ದು. ಕರನಿರಾಕರಣೆಯ ಚಳವಳಿಯಲ್ಲಿದ್ದವರ ಆಸ್ತಿ ಜಪ್ತಿಯಾಯ್ತು. ಈ ಸತ್ಯಾಗ್ರಹಿಗಳು ಬಂಧನಕ್ಕೊಳಗಾದರು. ಅವರ ಕುಟುಂಬ

ದವರನ್ನು ಮನೆಗಳಿಂದ ಹೊರಹಾಕಿ ಆ ಮನೆಗಳನ್ನೂ ಜಪ್ತಿಮಾಡಲಾಯ್ತು. ಈ ಸತ್ಯಾಗ್ರಹಿಗಳ ತಾಳ್ಮೆ, ಧೈರ್ಯ-ಸ್ಥೈರ್ಯಗಳು ಅದ್ಭುತವಾಗಿದ್ದವು. "ಈ ಜನರು ಪಟ್ಟ ಯಾತನೆಗಳನ್ನು ಕಂಡು ನನ್ನ ಧೈರ್ಯ ಉಡುಗಿ ಹೋಯ್ತು!"—ಎಂದು ಉಕ್ಕಿನ ಮನುಷ್ಯ ಸರದಾರ್ ಪಟೇಲ್ ಉದ್ಗರಿಸಿದರು! ಸರಕಾರದ ದಬ್ಬಾಳಿಕೆಯ ವಿಧಾನಗಳೆಲ್ಲವೂ ಈ ಸತ್ಯಾಗ್ರಹಿಗಳೆದುರು ಮಣ್ಣು ಮುಕ್ಕಿದವು! ಜಪ್ತಿಯಾದ ಜಮೀನುಗಳನ್ನು ಹರಾಜಿನಲ್ಲಿ ಹಿಡಿಯುವವರಾರೂ ಇರಲಿಲ್ಲ! ಆ ಭೂಮಿಗಳತ್ತ ಕಣ್ಣೆತ್ತಿ ನೋಡಲು ಸಹ ಜನ ಹೇಸಿದ್ದರು! ಗಾಂಧೀಜಿಯ ಸತ್ಯಾಗ್ರಹತತ್ವ ಅಂಕೋಲೆಯಲ್ಲಿ ತುಂಬ ಯಶಸ್ಸು ಪಡೆಯಿತು.

೧೯೪೦ರಲ್ಲಿ ವೈಯುಕ್ತಿಕ ಸತ್ಯಾಗ್ರಹ ಆರಂಭವಾಯ್ತು. ಆಗ ೨ನೆಯ ಮಹಾ ಯುದ್ಧದ ಕಾರಣದಿಂದ ವೈಯಕ್ತಿಕ ಸತ್ಯಾಗ್ರಹವನ್ನೇ ಮಾಡಬೇಕಾಗಿ ಗಾಂಧೀಜಿ ಆದೇಶವಿತ್ತಿದ್ದರು. ಆ ಕಾಲದಲ್ಲಿ ಕರ್ನಾಟಕದ ಹಲವೆಡೆಗಳಲ್ಲಿ ಶಾಂತವಾಗಿ ನಡೆಯುತ್ತಿದ್ದ ದೊಡ್ಡ ದೊಡ್ಡ ಸಭೆಗಳು! ಪ್ರತಿಭಟಿಸುತ್ತ ಸೆರೆಮನೆಗಳಿಗೆ ಸೇರುತ್ತಿದ್ದ ಸತ್ಯಾಗ್ರಹಿಗಳ ತಂಡಗಳು! ಓ! ಅದೊಂದು ಅನನ್ಯ ಸಾಧಾರಣ ಅನುಭವ!

## "ಮಾಡು ಇಲ್ಲವೆ ಮಡಿ"

"ಚಲೇ ಜಾವ್" ಅಥವಾ "ತೊಲಗಿ ಭಾರತದಿಂದ" (Quit India) ಚಳವಳಿಯಲ್ಲಿ ಕರ್ನಾಟಕದ ಅಸಂಖ್ಯ ಜನತೆ ಶಾಂತರೀತಿಯಲ್ಲಿ ದೃಢ ನಿಶ್ಚಯದಿಂದ ಭಾಗವಹಿಸಿದರು. ಧಾರವಾಡ, ಬೆಳಗಾವಿ, ವಿಜಾಪುರ, ಉತ್ತರ ಕನ್ನಡ ಜಿಲ್ಲೆಗಳ ಸತ್ಯಾಗ್ರಹಿಗಳು ಒಂದು ವಿಶಿಷ್ಟ ರೀತಿಯಲ್ಲಿ ಈ ಚಳವಳಿಯಲ್ಲಿ ಭಾಗವಹಿಸಿದರು. ಆಗ ಮಹಾತ್ಮರು ಸೆರೆಮನೆಯಲ್ಲಿದ್ದರು. ಅವರ ಪರಮ ಶಿಷ್ಯ ಮಶ್ರೂವಾಲಾ ಅವರು 'ಹರಿಜನ' ಪತ್ರಿಕೆಯಲ್ಲಿ ಬರೆದ

ಸಂಪಾದಕೀಯದಿಂದ ಪ್ರಚೋದನೆಗೊಂಡ ಕನ್ನಡ ಜನ ತಂಡ ತಂಡವಾಗಿ 'ಕಪಿ ಯುದ್ಧ' ಹೂಡಿದರು! ರೇಲ್ವೆ ಕಂಬಿಗಳನ್ನು ಕೀಳುವುದು, ಅಂಚೆ-ತಂತಿಗಳನ್ನು ಕತ್ತರಿಸುವುದು, ರೇಲ್ವೆ ಸಿಲ್ದಾಣಗಳನ್ನು ಸುಡುವುದು, ಸರಕಾರೀ ಕಚೇರಿ ಲೂಟಿಮಾಡುವುದು ಇವೆಲ್ಲ ಕಾರ್ಯಕ್ರಮಗಳನ್ನು ಈ ಚಳವಳಿ ಒಳಗೊಂಡಿತ್ತು. 'ಮಾಡು ಇಲ್ಲವೆ ಮಡಿ' (Do or Die) ಎಂಬುದೇ ಈ ಸತ್ಯಾಗ್ರಹಿಗಳ ಘೋಷಣೆಯಾಗಿತ್ತು! ಅನೇಕ ಸ್ಥಳಗಳಲ್ಲಿ ಸರಕಾರೀ ಕೆಲಸವೆಲ್ಲ ನಿಂತುಹೋಯ್ತು! ಜನರೆಲ್ಲರೂ ಈ ಸತ್ಯಾಗ್ರಹಿಗಳಿಗೆ ಸಕಲ ವಿಧದ ನೆರವು ನೀಡುತ್ತಿದ್ದರು! ಭೂಗತರಿದ್ದ ಈ ಚಳವಳಿ ನಾಯಕರನ್ನು ಹಿಡಿದು ಕೊಟ್ಟಲ್ಲಿ ೫೦೦೦ ರೂಪಾಯಿಗಳ ಬಹುಮಾನವನ್ನು ಸರಕಾರ ಸಾರಿತು. ಕೆಲವು ಸತ್ಯಾಗ್ರಹಿಗಳು ಪೋಲೀಸರ ಗುಂಡಿಗೆ ಆಹುತಿಯಾದರು. ಈ ಹುತಾತ್ಮರಲ್ಲಿ ಮಹದೇವಪ್ಪ ಮೈಲಾರ್ ಅವರು ಪ್ರಮುಖರು. ಹಿಂದಕ್ಕೆ ದಾಂಡೀಯಾತ್ರೆಯಲ್ಲಿ ಮಹಾತ್ಮರ ಸಂಪರ್ಕ ಪಡೆದ ವೀರ ಸತ್ಯಾಗ್ರಹಿ ಇವರು! ಈ ಚಳವಳಿ ನಿಜವಾಗಿಯೂ ಅತ್ಯುಗ್ರವಾಗಿತ್ತು. ಭೂಗತ ಸತ್ಯಾಗ್ರಹಿಗಳನ್ನು ಕಂಡಲ್ಲಿ ಗುಂಡುಹಾಕಿ ಕೊಲ್ಲಿರೆಂದು ಸರಕಾರ ಆದೇಶವಿತ್ತಿತ್ತು!

ಈ 'ಕಪಿಯುದ್ಧ' ತಂತ್ರವು ಗಾಂಧೀಜಿಯ ಸತ್ಯಾಗ್ರಹ ತತ್ವಕ್ಕೆ ಸರಿಹೊಂದಿರಲಿಲ್ಲ. ಆದರೆ ೧೮೫೭ರ ತರುವಾಯ ಭಾರತದಲ್ಲೆಲ್ಲೂ ಇಷ್ಟು ದೀರ್ಘಕಾಲ ಈ ತರಹದ 'ಕಪಿಯುದ್ಧ' ನಡೆದಿಲ್ಲವೆಂಬ ಕೀರ್ತಿ ಕರ್ನಾಟಕದ್ದಾಗಿದೆ!

## ಸ್ತ್ರೀಯರ ಸತ್ಯಾಗ್ರಹ

ಉತ್ತರ ಕನ್ನಡ ಜಿಲ್ಲೆಯ ಸ್ತ್ರೀಯರೂ ಕೂಡ ಸತ್ಯಾಗ್ರಹ ಹೂಡಿದರು. ಚರ ಆಸ್ತಿ, ಸ್ಥಿರ ಆಸ್ತಿ ಹರಾಜು ಮಾಡುವಾಗ ಯಾರೂ ಕೊಳ್ಳದಂತೆ ಉಪವಾಸ ಸತ್ಯಾಗ್ರಹವನ್ನು ಈ ವೀರಮಹಿಳೆಯರು ಕೈಗೊಳ್ಳುತ್ತಿದ್ದರು. ಸ್ತ್ರೀಯರ ಈ ಸತ್ಯಾಗ್ರಹವು ಭಾರತದಲ್ಲೇ ಅಪ್ರತಿಮವೆನಿಸಿತು.

## ಗಾಂಧೀನಾಡು '

ಒಟ್ಟಿನಲ್ಲಿ, ಆಧುನಿಕ ಕಾಲದಲ್ಲಿ ಕರ್ನಾಟಕವು ನಡೆಸಿದ ಈ ಸ್ವಾತಂತ್ರ್ಯ ಸಂಗ್ರಾಮವು ಸ್ವಾರ್ಥ ತ್ಯಾಗ, ಕಷ್ಟಸಹಿಷ್ಣುತೆ, ಧೈರ್ಯಸಾಹಸಗಳಲ್ಲಿ ಭಾರತೀಯ ನಾಯಕರೆಲ್ಲರನ್ನೂ ಬೆರಳು ಕಚ್ಚುವಂತೆ ಮಾಡಿತು. ಸತ್ಯಾಗ್ರಹ ಪ್ರಯೋಗದಲ್ಲಿ ಗಾಂಧೀಜಿಯ ಮೆಚ್ಚಿಕೆಗೆ ಪಾತ್ರವಾದ ಕರ್ನಾಟಕ 'ಗಾಂಧೀ ನಾಡು' ಎಂದು ಹೆಸರು ಪಡೆಯಿತು!

## ಕರ್ನಾಟಕದಲ್ಲಿ ಹೊನ್ನು ಬೆಳೆಯಲಿ!

ಸ್ವಾತಂತ್ರ್ಯಯುದ್ಧ ಮುಗಿಯಿತು. ವಿದೇಶೀಯರಿಂದ ಮುಕ್ತಿಪಡೆದ ಭಾರತೀಯರು ಈಗ ರಾಷ್ಟ್ರವನ್ನು ಕಟ್ಟುವ ಗುರುತರ ಕಾರ್ಯದಲ್ಲಿ ತೊಡಗಿದ್ದಾರೆ. ೧೯೫೬ರಲ್ಲಿ ಕರ್ನಾಟಕ ಏಕೀಕೃತವಾಗಿ 'ಮೈಸೂರು ರಾಜ್ಯ' ಎಂದು ನಾಮಕರಣ ಹೊಂದಿ, ನೆಹರೂ, ಲಾಲ್‌ಬಹದ್ದೂರ್, ಈಗ ಶ್ರೀಮತಿ ಇಂದಿರಾ ಗಾಂಧೀ—ಇವರ ನೇತೃತ್ವದಲ್ಲಿ ಪ್ರಗತಿ ಹೊಂದುತ್ತಾ ನಡೆದಿದೆ. ಸ್ವಾತಂತ್ರ್ಯ ಸಂಗ್ರಾಮ ಕಾಲದಲ್ಲಿದ್ದ ಅದೇ ದೇಶಾಭಿಮಾನ, ಅದೇ ತ್ಯಾಗ, ಅದೇ ಸಾಹಸ ಇಂದೂ ತೀರ ಆವಶ್ಯಕವಾಗಿವೆ. ಇಂದು ಭಾರತದ ಪ್ರಧಾನ ಮಂತ್ರಿಯಾಗಿ ರಾಷ್ಟ್ರನೌಕೆಯನ್ನು ಯಶಸ್ವಿಯಾಗಿ ಸಾಗಿಸುತ್ತಿರುವ ಶ್ರೀಮತಿ ಇಂದಿರಾ ಗಾಂಧಿಯವರ ಕರ್ತೃತ್ವಶಕ್ತಿಯಲ್ಲಿ ಸಮರ್ಥ ನೇತೃತ್ವದಲ್ಲಿ ನಂಬುಗೆಯಿರಿಸಿರುವ ಕನ್ನಡ ನಾಯಕರು ರಾಜ್ಯದ ಆಡಳಿತ ನಡೆಸಿದ್ದಾರೆ. ಕನ್ನಡ ಜನತೆ ಅವರಲ್ಲಿಟ್ಟಿರುವ ಅಪಾರ ವಿಶ್ವಾಸಕ್ಕೆ ಅವರು ಪಾತ್ರರಾಗಿ 'ಕರ್ನಾಟಕ'ವೆಂಬ ಹೊಸ ನಾಮಧೇಯದಿಂದ ಶೋಭಿಸುವ ಈ ಪ್ರಾಚೀನ ಪುಣ್ಯಭೂಮಿಯಲ್ಲಿ ಹೊನ್ನು ಬೆಳೆಯುವಂತೆ ಶ್ರಮಿಸಿ ಶ್ರೇಯೋಭಾಗಿಗಳಾಗಲಿ ಎಂದು ಹಾರೈಸೋಣ!

# ೫. ಸ್ವಾತಂತ್ರ್ಯೋತ್ತರ ಭಾರತ

## ಪ್ರಥಮ ಪ್ರಧಾನ ಮಂತ್ರಿ ನೆಹರೂ ವಾಣಿ

ಭಾರತೀಯರ ಬಹುಕಾಲದ ಸ್ವಾತಂತ್ರ್ಯದ ಕನಸು ಆಗಸ್ಟ್ ೧೪-೧೫, ೧೯೪೭ನೆಯ ಮಧ್ಯರಾತ್ರಿಯಲ್ಲಿ ನನಸಾಯಿತು. ಸ್ವತಂತ್ರ ಭಾರತದ ಪ್ರಥಮ ಪ್ರಧಾನ ಮಂತ್ರಿಯಾದ ಜವಹರ್‌ಲಾಲ್ ನೆಹರೂ ಅವರು ೧೪ನೆಯ ತಾರೀಖಿನಂದು ರಾಜ್ಯ ವ್ಯವಸ್ಥಾಸಭೆಯಲ್ಲಿ ಭಾವೋದ್ರೇಕದಿಂದ ಮಾತನಾಡುತ್ತಾ ಸ್ವಾತಂತ್ರ್ಯದ ಮಹತ್ವವನ್ನು ಕುರಿತು ಈ ರೀತಿ ಹೇಳಿದರು :

"ಮಧ್ಯರಾತ್ರಿಯ ಗಂಟೆ ಹೊಡೆದ ಮೇಲೆ, ವಿಶ್ವವೆಲ್ಲವೂ ನಿದ್ರಿಸುತ್ತಿರುವಾಗ, ಭಾರತ ಬದುಕಿಗೆ ಮತ್ತು ಸ್ವಾತಂತ್ರ್ಯಕ್ಕೆ ಎಚ್ಚರಗೊಳ್ಳುತ್ತದೆ. ಇತಿಹಾಸದಲ್ಲಿ ಅಪರೂಪವಾಗಿ ಬರುವ ಆ ಒಂದು ಕ್ಷಣದಲ್ಲಿ ಒಂದು ಯುಗವು ಕೊನೆಗೊಂಡು, ಹಳೆಯದರಿಂದ ಹೊಸಯುಗಕ್ಕೆ ಕಾಲಿಡುತ್ತೇವೆ. ಆಗ ಬಹುಕಾಲದಿಂದ ನಿಗ್ರಹಿಸಲ್ಪಟ್ಟ ದೇಶದ ಜೀವ ವಾಕ್‌ಶಕ್ತಿಯನ್ನು ಹೊಂದುತ್ತದೆ.

"....ಈ ದಿನ ನಾವು ದುರದೃಷ್ಟದ ಕಾಲವನ್ನು ಮುಗಿಸುತ್ತೇವೆ. ಭಾರತ ಪುನಃ ಬೆಳಕಿಗೆ ಬರುತ್ತದೆ.

"ಆದರೆ ಭವಿಷ್ಯವು ನಿರಾತಂಕವೂ, ವಿಶ್ರಮಿಸಿಕೊಳ್ಳುವಂತಹದೂ ಅಲ್ಲ. ಭಾರತದ ಸೇವೆ ಅಂದರೆ ಅಲ್ಲಿ ವ್ಯಥೆ ಪಡುತ್ತಿರುವ ಅಕ್ಷಾಂತರ ಜನರ ಸೇವೆ; ಅಂದರೆ ಬಡತನ, ಅಜ್ಞಾನ, ರೋಗ ಮತ್ತು ಸುಯೋಗದ ಅಸಮಾನತೆಯನ್ನು

ಕೊನೆಗಾಣಿಸುವುದು. ನಮ್ಮ ತಲೆಮಾರಿನ ಮಹಾಪುರುಷನ ಮಹತ್ವಾಕಾಂಕ್ಷೆ ಪ್ರತಿಯೊಬ್ಬನ ಕಣ್ಣೀರನ್ನು ತೊಡೆಯುವುದು. ಎಲ್ಲಿಯವರೆಗೆ ಜನರು ಕಣ್ಣೀರು ಸುರಿಸುವುದು ವ್ಯಥೆ ಪಡುವುದು ಇರುತ್ತದೆಯೋ ಅಲ್ಲಿಯವರೆಗೆ ನಮ್ಮ ಕೆಲಸ ಮುಗಿದಂತಾಗುವುದಿಲ್ಲ."

ಅದೇ ದಿನ ಇತರರಿಗೆ ನೀಡಿದ ಸಂದೇಶ, ಭಾಷಣಗಳಲ್ಲಿ ನೆಹರೂ ಹೀಗೆ ನುಡಿದರು :

"ವಿಧಿ ಯೋಜಿಸಿದ ದಿನ ಬಂದಿದೆ. ಭಾರತ ದೀರ್ಘಜಡತೆ ಮತ್ತು ಹೋರಾಟದಿಂದ ಎಚ್ಚೆತ್ತು, ಜೀವಂತವಾಗಿ, ಅನಧೀನ ಮತ್ತು ಸ್ವತಂತ್ರವಾಗಿ ದೃಢವಾಗಿ ನಿಲ್ಲುತ್ತಿದೆ....ಸ್ವಾತಂತ್ರ್ಯದ ತಾರೆ, ನೂತನ ಪೂರ್ವದಲ್ಲಿ ಉದಯಿಸುತ್ತಿದೆ; ಹೊಸ ಭರವಸೆ, ಬಹುಕಾಲ ಆದರಿಸಿದ ಒಂದು ದೃಷ್ಟಿ ರೂಪು ತಾಳುತ್ತಿದೆ. ಈ ತಾರೆ ಯಾವಾಗಲೂ ಅಸ್ತವಾಗದಿರಲಿ.

"ನಾವು ಇಂದು ಸರ್ವಸ್ವತಂತ್ರ ಪ್ರಜೆಗಳಾಗಿದ್ದೇವೆ. ನಾವು ಪೂರ್ವದ ಅನಿಷ್ಟ ಹೊರೆಯನ್ನು ತೊಲಗಿಸಿದ್ದೇವೆ. ನಾವು ವಿಶ್ವವನ್ನು ಶಾಂತಿಯುತ ಮತ್ತು ಸ್ನೇಹದ ಕಣ್ಣುಗಳಿಂದ ಭವಿಷ್ಯವನ್ನು ನೆಚ್ಚಿಕೆ ಮತ್ತು ಆತ್ಮವಿಶ್ವಾಸ ದಿಂದ ನೋಡುತ್ತೇವೆ."

ಬಡತನವನ್ನು ತೊಲಗಿಸಲು ಆರ್ಥಿಕ ಯೋಜನೆಯನ್ನು ರೂಪಿಸುವುದು, ಮೂಢ ಕಂದಾಚಾರಗಳನ್ನು ನಿರ್ಮೂಲ ಮಾಡಲು ಸಮಾಜ ಸುಧಾರಣೆ ಕೈಕೊಳ್ಳುವುದು, ದೇಶದ ಪ್ರಗತಿಗೆ ಕಂಟಕವಾಗಿದ್ದ ಅಶಾಂತಿಯನ್ನು ನಿವಾರಿಸುವುದು, ಮತ್ತು ನೆರೆಹೊರೆಯ ರಾಷ್ಟ್ರಗಳೊಂದಿಗೆ ಸ್ನೇಹದಿಂದ ಸಹಬಾಳುವೆ ಮಾಡುವುದು–ಇವು ಸ್ವತಂತ್ರ ಭಾರತದ ಪವಿತ್ರ ಉದ್ದೇಶಗಳೆಂದು ಪಂಡಿತ ನೆಹರೂ ವಾಣಿ ಸ್ಪಷ್ಟಪಡಿಸಿತು.

## ಭಾರತ-ಪಾಕಿಸ್ತಾನ್ ವಲಸೆಗಾರ ತಂಡಗಳು

ಸ್ವಾತಂತ್ರ್ಯ ಬಂದ ತರುಣದಲ್ಲಿಯೇ ಭಾರತ ಕ್ಲಿಷ್ಟ ಪರಿಸ್ಥಿತಿಯನ್ನು ಎದುರಿಸಬೇಕಾಯಿತು. ಸ್ವಾತಂತ್ರ್ಯ ಪೂರ್ವದ ಹಿಂದೂ-ಮುಸಲ್ಮಾನ್ ಗಲಭೆಗಳು ಮರುಕಳಿಸಿದವು ಭಾರತದ ವಿಭಜನೆಯ ನಂತರ ಅಲ್ಪ ಸಂಖ್ಯಾತರು ತಮ್ಮ ಭವಿಷ್ಯದ ಬಗ್ಗೆ ಹೆದರಿಕೆ ಹೊಂದಿ, ಭಾರತದ ಮುಸಲ್ಮಾನರು ಪಾಕಿಸ್ತಾನಕ್ಕೂ, ಪಾಕಿಸ್ತಾನದ ಹಿಂದೂಗಳು ಭಾರತಕ್ಕೂ ವಲಸೆ ಹೋಗಲಾರಂಭಿಸಿದರು. ಆದರೆ ಈ ವಲಸೆ ಶಾಂತ ರೀತಿಯಿಂದ ನಡೆಯದೆ ದ್ವೇಷದ ಸೇಡಿಗೆ ದಾರಿ ಮಾಡಿಕೊಟ್ಟಿತು. ಇದರಿಂದ ದೇಶದಲ್ಲಿ ಗಲಭೆಯುಂಟಾಗಿ ನಿರಪರಾಧಿಗಳು ಕೊಲೆ, ಸುಲಿಗೆ, ಲೂಟಿಗಳಿಗೆ ತುತ್ತಾದರು. ಭಾರತದಲ್ಲಿ ಹಿಂದೆಂದೂ ನಡೆಯದಂತಹ ಪಾಶವೀ ಕೃತ್ಯಗಳನ್ನು ಜನರು ನೋಡಬೇಕಾಯಿತು. ಪ್ರಾಣ ಹಾಗೂ ಮಾನಾಪಹರಣಗಳಿಗೆ ಹೆದರಿದ ಅಲ್ಪಸಂಖ್ಯಾತರು ತಮ್ಮ ಆಸ್ತಿ, ಮನೆಗಳನ್ನು ತೊರೆದು ಭಾರತಕ್ಕೆ ನಿರಾಶ್ರಿತರಾಗಿ ಬಂದರು. ಈ ನಿರಾಶ್ರಿತರಿಗೆ ವಸತಿ ಮತ್ತು ಉದ್ಯೋಗಾವಕಾಶಗಳನ್ನು ದೊರಕಿಸಿಕೊಡುವುದು ಭಾರತ ಎದುರಿಸಿದ ಅತ್ಯಂತ ಪ್ರಬಲವಾದ ಸಮಸ್ಯೆ. ದಂಡಕಾರಣ್ಯ ಯೋಜನೆಯನ್ನು ರೂಪಿಸಿ, ದೇಶದ ಹಣವನ್ನು ನೀರಿನಂತೆ ವ್ಯಯ ಮಾಡಿ ಭಾರತ ಈ ಸಮಸ್ಯೆಯನ್ನು ಸುಧಾರಿಸಿತು.

## ಜನತಾಂತ್ರಿಕ ಭಾರತ ಗಣರಾಜ್ಯ

ಸ್ವತಂತ್ರ ಭಾರತಕ್ಕೆ ಸಂವಿಧಾನ ರಚಿಸಲು ಒಂದು ಕರಡು ಸಮಿತಿ (Drafting Committee)ಯನ್ನು ರಚಿಸಲಾಯಿತು. ಈ ಕರಡು ಸಮಿತಿಯ ಪರಿಶ್ರಮದಿಂದ ರಚಿತವಾದ ಹೊಸ ಸಂವಿಧಾನವನ್ನು ರಾಜ್ಯಾಂಗ ರಚನಾ ಸಮಿತಿ ಹಲವು ತಿದ್ದುಪಡಿಗಳೊಡನೆ ಅಂಗೀಕರಿಸಿತು. ಹೊಸ ಸಂವಿಧಾನವು ಜನವರಿ ೨೬, ೧೯೫೦ರಂದು ಜಾರಿಗೆ ಬಂದಿತು. ಅದರಂತೆ

ಬಿಡುಗಡೆಯ ಬೆಳ್ಳಿ

ಭಾರತವು ಸಂಪೂರ್ಣ ಪ್ರಭುತ್ವಸಂಪನ್ನ ಜನತಾಂತ್ರಿಕ ಗಣರಾಜ್ಯವಾಯಿತು.

## ದೇಶೀಯ ಸಂಸ್ಥಾನಗಳ ಸಂಯೋಜನೆ

ಆಂಗ್ಲರ ನೇರ ಆಡಳಿತಕ್ಕೊಳಪಡದ ಆದರೆ ಅವರ ಅಧೀನದಲ್ಲಿದ್ದು ಪ್ರಾಂತಗಳಷ್ಟೇ ಸ್ವಾತಂತ್ರ್ಯ ಹೊಂದಿದ್ದ ಸುಮಾರು ೫೬೬ ಸಣ್ಣ-ದೊಡ್ಡ ದೇಶೀಯ ಸಂಸ್ಥಾನಗಳಿದ್ದವು. ಇವುಗಳಲ್ಲಿ ಅನೇಕ ಸಂಸ್ಥಾನಗಳ ಆಡಳಿತ ಅಸಮರ್ಪಕವಾಗಿದ್ದು ಜನರು ಅಸಮಾಧಾನಗೊಂಡಿದ್ದರು. ಆಂಗ್ಲರು ಭಾರತಕ್ಕೆ ಸ್ವಾತಂತ್ರ್ಯ ಕೊಟ್ಟಾಗ ಈ ಸಂಸ್ಥಾನಿಕರಿಗೆ ಸಾರ್ವಭೌಮಾಧಿಕಾರವನ್ನು ಕೊಟ್ಟು, ಭಾರತ ಅಥವಾ ಪಾಕಿಸ್ತಾನಕ್ಕೆ ಸೇರುವ ಅಧಿಕಾರವನ್ನು ಅವರ ಇಷ್ಟಕ್ಕೆ ಬಿಟ್ಟರು. ಸ್ವಾತಂತ್ರ್ಯಾನಂತರ ದೇಶೀಯ ಸಂಸ್ಥಾನಗಳಲ್ಲಿ ಜನತಾ ಸರಕಾರ ಸ್ಥಾಪನೆಗೆ ದಂಗೆ–ಅಶಾಂತಿಗಳುಂಟಾದುವು. ಈ ಸಂಸ್ಥಾನಗಳನ್ನು ಭಾರತದ ಒಕ್ಕೂಟಕ್ಕೆ ಸೇರಿಸುವ ಕಾರ್ಯದಕ್ಷತೆಯಿಂದಲೂ, ಉಪಾಯದಿಂದಲೂ ಆಗಬೇಕಾಗಿತ್ತು. ಸ್ವತಂತ್ರ ಭಾರತದ ಮೊದಲ ಒಳಾಡಳಿತ ಸಚಿವರಾದ, ಭಾರತದ 'ಉಕ್ಕಿನ ಮನುಷ್ಯ' ಎಂದು ಗೌರವದಿಂದ ಕರೆಯಲ್ಪಡುತ್ತಿದ್ದ ಸರ್ದಾರ್ ವಲ್ಲಭಭಾಯಿ ಪಟೇಲ್ ಅವರು ಚಾತುರ್ಯ ಹಾಗೂ ತಾಳ್ಮೆಗಳಿಂದ ಸಂಸ್ಥಾನಗಳ ವಿಲೀನ ಕಾರ್ಯಕ್ರಮವನ್ನು ಕೈಕೊಂಡರು. ಮೊದಲಿಗೆ ಸುಮಾರು ೨೫೦ ಸಣ್ಣ-ಪುಟ್ಟ ಸಂಸ್ಥಾನಗಳು ನೆರೆಹೊರೆಯ ರಾಜ್ಯಗಳಲ್ಲಿ ಸೇರ್ಪಡೆಯಾದವು. ಕೆಲವು ಸಣ್ಣ ದೊಡ್ಡ ಸಂಸ್ಥಾನಗಳು ಸೇರಿ ಸಂಘವಾದುವು. ಕೆಲವು ದೊಡ್ಡ ಸಂಸ್ಥಾನಗಳು ಹಾಗೆಯೇ ಉಳಿದು ಒಕ್ಕೂಟದಲ್ಲಿ ಸೇರಿಕೊಂಡವು.

## ಕಾಶ್ಮೀರ ಸಮಸ್ಯೆ

ಅನೇಕ ಸಂಸ್ಥಾನಗಳು ಪ್ರಜಾ ಸರಕಾರದ ವ್ಯವಸ್ಥೆಗೆ ಒಪ್ಪಿಕೊಂಡರೂ, ಹೈದರಾಬಾದ್ ಮತ್ತು ಕಾಶ್ಮೀರಗಳಲ್ಲಿ ಅನಿಶ್ಚಿತ ಸ್ಥಿತಿ ಮುಂದುವರಿಯಿತು. ಹಿಂದೂ ಬಹು ಸಂಖ್ಯಾತರಿದ್ದ ಹೈದರಾಬಾದ ರಾಜ್ಯದ ನಿಜಾಮನು ಪಾಕಿಸ್ತಾನದೊಂದಿಗೆ ವಿಲೀನಗೊಳ್ಳಬೇಕೆಂಬ ಉದ್ದೇಶದಿಂದ ಹಿಂದೂ ಗಳಿಗೆ ಹಿಂಸೆ ಕೊಡಲಾರಂಭಿಸಿದ. ಹಿಂದೂ ಜನರು ಬೇಸತ್ತರು. ಸರ್ದಾರ್ ಪಟೇಲ್ ಅವರಿಗೆ ಮನಕರಗಿತು. ೧೯೪೮ರ ಸೆಪ್ಟೆಂಬರ್‌ನಲ್ಲಿ ನಡೆದ ಕ್ಷಿಪ್ರ ಪೊಲೀಸ್ ಕಾರ್ಯಾಚರಣೆಯಿಂದ ಹೈದರಾಬಾದ್ ಭಾರತದಲ್ಲಿ ಸೇರಿತು.

ಮುಸಲ್ಮಾನರು ಬಹು ಸಂಖ್ಯಾತರಿದ್ದ ಕಾಶ್ಮೀರದ ಹಿಂದೂ ರಾಜ ೧೯೪೭ನೆಯ ಅಕ್ಟೋಬರ್‌ನಲ್ಲಿ ಭಾರತದ ಒಕ್ಕೂಟ ಸೇರಲು ಒಪ್ಪಿದನು. ಕಾಶ್ಮೀರವನ್ನು ಕಬಳಿಸಬೇಕೆಂದು ಪಾಕಿಸ್ತಾನವು ಹೊಂಚು ಹಾಕುತ್ತಿತ್ತು. ಇದೇ ಕಾರಣಕ್ಕಾಗಿ ಭಾರತ-ಪಾಕಿಸ್ತಾನಗಳಿಗೆ ಯುದ್ಧವಾಯಿತು. ವಿಶ್ವ ಸಂಸ್ಥೆಯ ಮಧ್ಯಸ್ಥಿಕೆಯಿಂದ ಯುದ್ಧ ನಿಂತು ಕದನ ವಿರಾಮ ರೇಖೆಯನ್ನು ಎರಡು ಪಕ್ಷಗಳೂ ಒಪ್ಪಿಕೊಂಡವು. ಆದರೆ ಕಾಶ್ಮೀರದ ಪ್ರಶ್ನೆ ಇನ್ನೂ ಬಗೆಹರಿಯದೆ ಉಳಿದು ಭಾರತ-ಪಾಕಿಸ್ತಾನಗಳ ಶಾಂತಿಯನ್ನೂ ಆಗಾಗ ಕದಡಲು ಕಾರಣವಾಗಿದೆ.

## ಫ್ರೆಂಚ್-ಪೋರ್ತುಗೀಜ್ ವಸಾಹತುಗಳು

ಭಾರತದಲ್ಲಿದ್ದ ತಮ್ಮ ವಸಾಹತುಗಳನ್ನು ಫ್ರೆಂಚರು ಸ್ವಯಂ ಪ್ರೇರಣೆ ಯಿಂದ ಭಾರತಕ್ಕೆ ಬಿಟ್ಟುಕೊಟ್ಟರು. ಆದರೆ ಪೋರ್ತುಗೀಜರು ತಮ್ಮ ನೆಲೆ ಗಳನ್ನು ಸ್ವಾತಂತ್ರ್ಯಾನಂತರ ೧೪ ವರ್ಷಗಳ ವರೆಗೂ ತಮ್ಮ ಸ್ವಾಧೀನದಲ್ಲಿ

ಉಳಿಸಿಕೊಂಡಿದ್ದರು. ೧೯೬೧ರಲ್ಲಿ ಮಿಲಿಟರಿ ಕಾರ್ಯಾಚರಣೆಯಿಂದ ಭಾರತದ ನೆಲೆಗಳಿಂದ ಪೋರ್ತುಗೀಜರನ್ನು ಹೊರದೂಡಿ, ಆ ನೆಲೆಗಳಾದ ಗೋವ, ದೀವ್, ದಮನ್‌ಗಳನ್ನು ಭಾರತದ ಒಕ್ಕೂಟಕ್ಕೆ ಸೇರಿಸಲಾಯ್ತು.

# ಜವಹರ್‌ಲಾಲ್ ನೆಹರೂ

ಸ್ವತಂತ್ರ ಭಾರತದ ಭವಿತವ್ಯವನ್ನು ರೂಪಿಸುವ ಹೊಣೆಯನ್ನು ಸ್ವತಂತ್ರ ಭಾರತದ ಮೊದಲ ಪ್ರಧಾನಿ ಜವಹರ್‌ಲಾಲ್ ನೆಹರೂ ಅವರು ಹೊತ್ತರು. ಅವರ ಅವಿಶ್ರಾಂತ ದುಡಿಮೆಯಿಂದ ಭಾರತವು ಅನೇಕ ಕ್ಷೇತ್ರಗಳಲ್ಲಿ ಪ್ರಗತಿಯನ್ನು ಸಾಧಿಸಿತಲ್ಲದೆ, ವಿಶ್ವದಲ್ಲಿ ಗಣನೀಯವಾದ ಸ್ಥಾನವನ್ನು ಪಡೆಯಲು ಸಾಧ್ಯವಾಯಿತು. ಸ್ವಾತಂತ್ರ್ಯೋತ್ತರ ಭಾರತದ ಈ ಕಾಲದ ಚರಿತ್ರೆಯನ್ನು 'ನೆಹರೂ ಯುಗ' ಎಂದು ಕರೆಯಬಹುದು.

ನವಭಾರತದ ಕಾರಣ ಪುರುಷ ಜವಹರ್‌ಲಾಲ್ ನೆಹರೂ ! ತಮ್ಮ ೧೫ನೆಯ ವರ್ಷದಲ್ಲಿ ವಿದ್ಯಾಭ್ಯಾಸಕ್ಕಾಗಿ ಲಂಡನ್ನಿಗೆ ತೆರಳಿದ್ದ ನೆಹರೂ ಇಂಗ್ಲೆಂಡಿನಲ್ಲಿದ್ದಾಗಲೇ ಬಂಗಾಳ ವಿಭಜನೆಯಿಂದುಂಟಾದ ಪ್ರತಿಭಟನೆಯನ್ನು ಕಂಡು ಅವರ ಮನಸ್ಸು ಕದಡಿತು. ಬ್ಯಾರಿಸ್ಟರ್ ಶಿಕ್ಷಣ ಮುಗಿಸಿ ೧೯೧೨ರಲ್ಲಿ ಸ್ವದೇಶಕ್ಕೆ ಮರಳಿ ಅಲಹಾಬಾದ್ ಹೈಕೋರ್ಟ್‌ನಲ್ಲಿ ವಕೀಲಿ ವೃತ್ತಿಯನ್ನು ಆರಂಭಿಸಿದಾಗ ಅವರ ಮನಸ್ಸು ರಾಜಕೀಯದತ್ತ ಹರಿಯಿತು. ೧೯೧೨ರಲ್ಲಿ ಪಾಟ್ನಾದಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಭಾಗವಹಿಸಿ ಅನಂತರ ತಿಲಕ ಮತ್ತು ಆನಿಬೆಂಸೆಟ್ ಪ್ರತ್ಯೇಕವಾಗಿ ಸ್ಥಾಪಿಸಿದ ಹೋಂರೂಲ್‌ಲೀಗನ್ನು ಸೇರಿದರು.

೧೯೧೬ನೆಯ ವರ್ಷ ನೆಹರೂ ದಕ್ಷಿಣ ಆಫ್ರಿಕೆಯಿಂದ ಮರಳಿದ್ದ ಬಾಪೂಜಿಯವರನ್ನು ಮೊದಲ ಬಾರಿಗೆ ಭೇಟಿ ಮಾಡಿದರು. ಈ ಭೇಟಿ ಅವರ ಮುಂದಿನ ರಾಜಕೀಯ ಜೀವನದಲ್ಲಿ ಮಹತ್ತರವಾದ ಪ್ರಭಾವವನ್ನು ಬೀರಿತು. ೧೯೧೯ರಲ್ಲಿ ಅವರು ಕಾಂಗ್ರೆಸ್ ಪ್ರವೇಶಿಸಿದರು. ೧೯೨೦ರಿಂದ ಗಾಂಧೀಜಿಯವರ ಜೊತೆಗೂಡಿ ಕಾಂಗ್ರೆಸ್ಸಿನ ಸ್ವರೂಪ ಮತ್ತು ಧೋರಣೆಗಳನ್ನು ರೂಪಿ

ಸಿದರು. ಕಾಂಗ್ರೆಸ್ ಸಂ ಮತ್ತು ಪ್ರಾಮಾಣಿಕತೆಗೆ ಅವರು ಕಾರಣರಾಗಿದ್ದರು. ೧೯ ರಾವಿ ಕಾಂಗ್ರೆಸ್ ಅಧಿವೇಶನವು ಅವರ ನಾಯಕತ್ವದಲ್ಲಿ ಃ ಪ್ರ ಕಾಂಗ್ರೆಸ್ಸಿನ ಮುಖ್ಯ ಧ್ಯೇಯ ವೆಂದು ತೀರ್ಮಾನಿಸಿತು. ಂಗ್ರೆಸ್ ಅಧಿವೇಶನದ ಅಧ್ಯಕ್ಷತೆ ಯನ್ನು ಅವರು ೧೯೩೦ರ

ನೆಹರೂ ಅವರು ಸ ಕಾರಧಾರೆಯಿಂದ ಪ್ರಭಾವಿತರಾಗಿದ್ದರು. ಜಯಪ್ರಕಾಶ್ ನಾರಾಯಣ್ ಮುಂತಾದ ನಾಯಕರು ಸ್ಥಾಪಿಸಿದ ಕಾಂಗ್ರೆಸ್ ಸೋಷಲಿಸ್ಟ್ ಪಕ್ಷದ ಸದಸ್ಯರೂ ಆಗಿದ್ದರು. ಆದರೆ ರಕ್ತಕ್ರಾಂತಿಗಳಿಂದ ಸಾಮಾಜಿಕ ಬದಲಾವಣೆಗಳನ್ನು ತರಬಯಸುವ ಸಾಮ್ಯವಾದಿ ವಿಚಾರಧಾರೆಯಲ್ಲಿ ಅವರಿಗೆ ನಂಬಿಕೆಯಿರಲಿಲ್ಲ. ಜನತಾಂತ್ರಿಕ ವಿಧಾನಗಳಲ್ಲಿ ಅವರಿಗೆ ಅಪಾರ ವಿಶ್ವಾಸ.

ನೆಹರೂ ಅವರು ಕ್ರಾಂತಿಕಾರರಾಗಿದ್ದರು. ಸೆರೆಮನೆ ಅವರ ಎರಡನೆಯ ಮನೆಯಾಗಿತ್ತು. ಅವರು ೯ ಸಾರಿ ಸೆರೆಮನೆಗೆ ಹೋಗಿ ೧೦ ವರ್ಷಗಳಿಗಿಂತ ಹೆಚ್ಚಾಗಿ ಸೆರೆಮನೆ ವಾಸ ಅನುಭವಿಸಿದರು. ಸಮಾಜ ಸುಧಾರಣೆ, ಆರ್ಥಿಕ ಯೋಜನೆ ಮತ್ತು ಪ್ರಜಾಪ್ರಭುತ್ವದ ನೀತಿಗಳನ್ನು ರೂಪಿಸಿದವರು ಅವರೇ. ಬಡತನ, ಮೂಢತೆ ಮತ್ತು ಪರಾಧೀನತೆಯಿಂದ ಚೈತನ್ಯ ಶೂನ್ಯರಾದ ಜನತೆಯ ವಿಮೋಚನೆಗಾಗಿ ನೆಹರೂ ಅವರು ವ್ಯಥೆಯ ಹಾಗೂ ಶ್ರಮದ ಜೀವನವನ್ನು ಆರಿಸಿಕೊಂಡರು.

ಎರಡನೆಯ ಮಹಾಯುದ್ಧದಲ್ಲಿ ಫಾಸಿಜಂ-ನಾಸಿಜಂನ ಬೆಳವಣಿಗೆಯನ್ನು ಕುತೂಹಲದಿಂದ ವೀಕ್ಷಿಸುತ್ತಿದ್ದ ನೆಹರೂ, ಬ್ರಿಟಿಷ್ ಸರಕಾರವು ಯುದ್ಧದ ನಂತರ ಭಾರತಕ್ಕೆ ಸ್ವಾತಂತ್ರ್ಯ ಕೊಡುವ ಭರವಸೆ ಇತ್ತರೆ, ಫಾಸಿಜಂ-ನಾಸಿಜಂ ವಿರುದ್ಧ ಭಾರತವು ಯುದ್ಧದಲ್ಲಿ ಭಾಗವಹಿಸಬೇಕೆಂದು ಅವರು ಆಶಿಸಿದರು. ಆದರೆ ಆಂಗ್ಲರು ಇದಕ್ಕೆ ಸಮ್ಮತಿಸಲಿಲ್ಲವಾದ ಕಾರಣ ಸ್ವಾತಂತ್ರ್ಯ ಚಳವಳಿಯನ್ನು

ತ್ವರಿತಗೊಳಿಸಲಾಯಿತು. 'ಭಾರತದಿಂದ ತೊಲಗಿ' ಚಳುವಳಿಯಲ್ಲಿ ನೆಹರೂರನ್ನು ಬಂಧಿಸಲಾಯಿತು. ಬಂಧನದಿಂದ ಬಿಡುಗಡೆ ಹೊಂದಿದ ಮೇಲೆ ೧೯೪೬ರ ಸೆಪ್ಟೆಂಬರ್ ೨ರಲ್ಲಿ ಅವರು ನಡುಗಾಲ ಸರಕಾರವನ್ನು ರಚಿಸಿದರು. ರಾಜ್ಯಾಂಗ ರಚನಾ ಸಮಿತಿಯಲ್ಲಿ ಅವರು ಮುಖ್ಯಪಾತ್ರವನ್ನು ವಹಿಸಿದರು. ಅಂತೆಯೇ ಅವರು ಸ್ವತಂತ್ರ ಭಾರತದ ಪ್ರಥಮ ಪ್ರಧಾನಿಯಾಗಲು ಎಲ್ಲ ಅರ್ಹತೆಯನ್ನು ಪಡೆದಿದ್ದರು. ಅಂದಿನಿಂದ ಭಾರತದ ಇತಿಹಾಸವು ಅವರ ಜೀವನದಲ್ಲಿ ಹಾಸು ಹೊಕ್ಕಾಯಿತು.

ಭಾರತವು ಸ್ವಾತಂತ್ರ್ಯ ಗಳಿಸಿದ ದಿನದಂದು ಮಾಡಿದ ಭಾಷಣದಲ್ಲಿ ನೆಹರೂ, ಸರಕಾರವು ಮಾಡಬೇಕಾದ ಮಹತ್ತರ ಕೆಲಸಗಳನ್ನು ವಿವರಿಸಿದರು. ಈ ಕಾರ್ಯಗಳನ್ನು ಮೂರು ವಿಧವಾಗಿ ವಿಂಗಡಿಸಬಹುದು: ೧. ಆರ್ಥಿಕ ಬೆಳವಣಿಗೆ, ೨. ಸಮಾಜ ಸುಧಾರಣೆ, ೩. ನೆರೆಹೊರೆಯ ರಾಷ್ಟ್ರಗಳೊಂದಿಗೆ ಶಾಂತಿಯ ಸಹ ಬಾಳುವೆ. ದೇಶದ ಆಡಳಿತ ಸೂತ್ರಗಳನ್ನು ವಹಿಸಿದಂದಿನಿಂದ ಮರಣ ಹೊಂದುವವರೆಗೆ ನೆಹರೂ ಅವಿಶ್ರಾಂತವಾಗಿ ದುಡಿದು ನಮ್ಮ ಹೃದಯ ಸಾಮ್ರಾಜ್ಯದಲ್ಲಿ ಚಿರಸ್ಥಾನವನ್ನು ಪಡೆದಿದ್ದಾರೆ.

## ಆರ್ಥಿಕ ಬೆಳವಣಿಗೆ

ಬ್ರಿಟಿಷರು ಭಾರತದ ಐಶ್ವರ್ಯವನ್ನು ಬ್ರಿಟನ್ನಿಗೆ ಸಾಗಿಸಿ, ಭಾರತದ ಕೈಗಾರಿಕೆಗಳನ್ನೆಲ್ಲಾ ಹಾಳು ಮಾಡಿದ್ದರು. ಎರಡನೆಯ ಮಹಾಯುದ್ಧ ಹಾಗೂ ದೇಶದ ವಿಭಜನೆಗಳು ದೇಶದ ಆರ್ಥಿಕಸ್ಥಿತಿಯನ್ನು ಇನ್ನೂ ಹೆಚ್ಚು ಅಸ್ತವ್ಯಸ್ತಗೊಳಿಸಿತ್ತು. ಸ್ವಾತಂತ್ರ್ಯದಿಂದ ಜೀವನಮಟ್ಟ ಮೇಲೇರುವುದೆಂದು ಜನತೆ ಆಶಿಸಿತ್ತು. ಆದ್ದರಿಂದ ನೆಹರೂ ದೇಶದ ಸಂಪನ್ಮೂಲಗಳನ್ನು ಕ್ರೋಢೀಕರಿಸಿ ಆರ್ಥಿಕ ಯೋಜನೆಯನ್ನು ರೂಪಿಸಬೇಕೆಂದು ಮೊದಲನೆಯ ಪಂಚವಾರ್ಷಿಕ ಯೋಜನೆಯನ್ನು ರೂಪಿಸಿದರು.

ದೇಶದ ಆರ್ಥಿಕಸ್ಥಿತಿಯನ್ನು ಭದ್ರವಾದ ನೆಲೆಯ ಮೇಲೆ ನಿರ್ಮಿಸುವುದು ಮೊದಲನೆಯ ಪಂಚವಾರ್ಷಿಕ ಯೋಜನೆಯ ಉದ್ದೇಶ. ಭಾರತವು ಗ್ರಾಮ ಗಳಿಂದ ಕೂಡಿದ ದೇಶ. ಗ್ರಾಮದ ಮುಖ್ಯವಾದ ಕಸುಬು ವ್ಯವಸಾಯ. ಭಾರತದ ಆರ್ಥಿಕಸ್ಥಿತಿಯ ಬೆನ್ನೆಲುಬಾದ ವ್ಯವಸಾಯವನ್ನು ದೇಶದ ಪ್ರಗತಿ ಅವಲಂಬಿಸಿದ್ದುದರಿಂದ ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿ ವ್ಯವ ಸಾಯಕ್ಕೆ ಆದ್ಯತೆಯನ್ನು ಕೊಡಲಾಯಿತು. ಇವುಗಳಲ್ಲಿ ಭಾರಿ ಪ್ರಮಾಣದ ನೀರಾವರಿ ಯೋಜನೆಗಳಲ್ಲಿ ಮುಖ್ಯವಾದುವು—ಭಾಕ್ರಾನಂಗಲ್, ಹಿರಾಕುಡ್ ಮತ್ತು ತುಂಗಭದ್ರ. ಭಾಕ್ರಾನಂಗಲ್ ಹಲವು ಉಪಯೋಗಗಳ ಜಲಾಶಯವು ಪ್ರಪಂಚದಲ್ಲಿಯೇ ಅತಿದೊಡ್ಡದಾಗಿದೆ. ಕೇಂದ್ರಾಡಳಿತಕ್ಕೆ ಒಳಪಟ್ಟ ಜಲಾ ಶಯ ಸುಮಾರು ೩೦ ಲಕ್ಷ ಎಕರೆ ಸಾಗುವಳಿಗೆ ನೀರು ಒದಗಿಸುವುದಲ್ಲದೆ ಸುಮಾರು ೬ ಲಕ್ಷ ಕಿಲೋವಾಟ್ಸ್ ವಿದ್ಯುತ್ತನ್ನು ಒದಗಿಸುತ್ತದೆ. ತುಂಗ ಭದ್ರಾ ಜಲಾಶಯ ಮೈಸೂರು ಮತ್ತು ಆಂಧ್ರಪ್ರದೇಶ ಸರಕಾರಗಳ ಜವಾಬ್ದಾರಿಯಿಂದ ನಿರ್ಮಿಸಲ್ಪಟ್ಟಿತು.

ಒರಿಸ್ಸಾದಲ್ಲಿ ಮಹಾನದಿಗೆ ನಿರ್ಮಿಸುತ್ತಿರುವ ಹಿರಾಕುಡ್ ಜಲಾಶಯ, ಬಂಗಾಳ ಬಿಹಾರಗಳಿಗೆ ಅನುಕೂಲತೆ ಕಲ್ಪಿಸುವ ದಾಮೋದರ್ ಕಣಿವೆ ಜಲಾಶಯ, ನಾಗಾರ್ಜುನ ಸಾಗರ, ಈ ಪ್ರತಿಯೊಂದು ಯೋಜನೆಯಿಂದಲೂ ಹಲವು ಲಕ್ಷ ಎಕರೆ ಜಮೀನಿಗೆ ನೀರು ಸರಬರಾಯಿಯಾಗುವುದಲ್ಲದೆ, ಲಕ್ಷಾಂತರ ಕಿಲೋವಾಟ್ ವಿದ್ಯುತ್ತು ಉತ್ಪಾದನೆಯಾಗುತ್ತದೆ.

ಈ ಜಲಾಶಯಗಳನ್ನು ಆಧುನಿಕ ಭಾರತದ ಯಾತ್ರಾಸ್ಥಳಗಳೆಂದು ನೆಹರೂ ವರ್ಣಿಸಿ ಜನತೆ ಅವುಗಳನ್ನು ನೋಡಿ ಸಂತೋಷ ಪಡಬೇಕೆಂದು ಕರೆಯಿತ್ತರು.

ಇದಲ್ಲದೆ ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಿಯೂ ಸಹ ನೂರಾರು ಹೊಸ ನೀರಾವರಿ ಯೋಜದೆಗಳನ್ನು ಕೈಕೊಳ್ಳಲಾಯಿತು. ಇವು

ಗಳಲ್ಲಿ ಬಹುಪಾಲು ಸಣ್ಣ ನೀರಾವರಿ ಯೋಜನೆಗಳಿದ್ದು ತ್ವರಿತದಲ್ಲಿ ಫಲ ನೀಡು ವಂತಹುದಾಗಿದ್ದವು.

ಈ ಯೋಜನೆಗಳಿಂದಾಗಿ ಭಾರತವು ಆಹಾರ ಕೊರತೆಯನ್ನು ನಿವಾರಿಸಿ ಸ್ವಾವಲಂಬಿಯಾಗಿದೆ.

ನೆಹರೂ ದೇಶದಲ್ಲಿ ಸಂಚರಿಸಿ ರೈತನ ಕಷ್ಟ ಸುಖಗಳನ್ನು ಚೆನ್ನಾಗಿ ಕಂಡು ಕೊಂಡಿದ್ದರು. ಆದ್ದರಿಂದ ವ್ಯವಸಾಯದಲ್ಲಿ ಪ್ರಗತಿ ಸಾಧಿಸಬೇಕಾದರೆ ಭೂ ಹಿಡುವಳಿಯ ಸುಧಾರಣೆ ಅವಶ್ಯಕವೆಂಬುದನ್ನು ಮನಗಂಡಿದ್ದರು. ಅಂತೆಯೇ ಯೋಜನಾ ಮಂಡಳಿ ಭೂ ಒಡೆತನದ ವಿಚಾರದಲ್ಲಿ ಸುಧಾರಣೆ ಗಳನ್ನು ಕೈಕೊಳ್ಳಲು ಅವರು ಕಾರಣರಾದರು.

ಸರಕಾರವು ಬಡ ರೈತನಿಗೆ ಕಡಿಮೆ ಬಡ್ಡಿ ದರದಲ್ಲಿ ಸಾಲವೊದಗಿಸುವುದರ ಮೂಲಕ ವ್ಯವಸಾಯದ ಪರಿಸ್ಥಿತಿಯನ್ನು ಸುಧಾರಿಸಿದೆ.

## ಭೂದಾನ ಚಳವಳಿ

ಭೂ ಹಿಡುವಳಿ ಸುಧಾರಣೆಗಾಗಿ ವಿನೋಬಾ ಭಾವೆಯವರು ೧೯೫೧ರಲ್ಲಿ ಭೂದಾನ ಚಳವಳಿಯನ್ನು ಪ್ರಾರಂಭಿಸಿದರು. ಹೆಚ್ಚು ಜಮೀನಿದ್ದವರಿಂದ ದಾನವಾಗಿ ಜಮೀನು ಪಡೆದು ಅದನ್ನು ಜಮೀನಿಲ್ಲದವರಿಗೆ ಹಂಚುವುದು ಈ ಚಳವಳಿಯ ಉದ್ದೇಶ. ಭಾವೆಯವರು ಭಾರತದಾದ್ಯಂತ ಸಂಚರಿಸಿ ೧೯೫೭ರ ವರೆಗೆ ಸುಮಾರು ೪೦ ಲಕ್ಷ ಎಕರೆ ಜಮೀನನ್ನು ದಾನವಾಗಿ ಪಡೆದು ಜಮೀನಿಲ್ಲ ದವರಿಗೆ ಹಂಚಿದರು. ಜಮೀನಿಲ್ಲದ ಕುಟುಂಬಕ್ಕೆ ಕೊನೆಯ ಪಕ್ಷ ೫ ಎಕರೆ ಯಷ್ಟಾದರೂ ಜಮೀನನ್ನು ದೊರಕಿಸಿ ಕೊಡಬೇಕೆಂಬ ಉದ್ದೇಶದಿಂದ ಈ ಕಾರ್ಯಕ್ರಮ ಮುಂದುವರಿದಿದೆ.

ರೈತನಿಗೆ ಆಧುನಿಕ ವಿಜ್ಞಾನದ ಫಲವನ್ನು ದೊರಕಿಸಿ ಕೊಡುವ ಸಲು ವಾಗಿ ಅನೇಕ ವಿಜ್ಞಾನ ಪರಿಶೋಧನಾ ಮಂಡಳಿಗಳು ಕಾರ್ಯ ತತ್ಪರವಾಗಿವೆ.

ಭಾರತದ ಪರಿಶೋಧನಾ ಮಂಡಳಿಯ ಅಂಗಗಳಾಗಿ ಹಲವು ಮುಖ್ಯ ವ್ಯವಸಾಯೋತ್ಪನ್ನಗಳನ್ನು ಸುಧಾರಿಸಲು ಅನೇಕ ಸಂಸ್ಥೆಗಳು ಕೆಲಸಮಾಡುತ್ತಿವೆ. ಅಲ್ಲದೆ ಪ್ರತಿ ರಾಜ್ಯದಲ್ಲಿಯೂ ಸ್ಥಾಪಿತವಾಗಿರುವ ವ್ಯವಸಾಯ ವಿಶ್ವವಿದ್ಯಾನಿಲಯಗಳು ಹೊಸ ತಳಿಗಳನ್ನು ಕಂಡು ಹಿಡಿದು ರೈತನ ಉತ್ಪನ್ನಗಳನ್ನು ಹೆಚ್ಚಿಸಲು ಗಣನೀಯ ಕೆಲಸಗಳನ್ನು ಮಾಡುತ್ತಿವೆ.

## ಕೈಗಾರಿಕೆ

ಆರ್ಥಿಕ ಕ್ಷೇತ್ರದ ಪ್ರಗತಿಗೆ ಕೈಗಾರಿಕಾಭಿವೃದ್ಧಿ ಬೇಗದ ಕೈ ಇದ್ದ ಹಾಗೆಂದು ನೆಹರೂ ಮನಗಂಡರು. ಅಭಿವೃದ್ಧಿ ಹೊಂದಿದ ಪಾಶ್ಚಾತ್ಯ ದೇಶಗಳೊಂದಿಗೆ ಸರಿಸಮಾನತೆಯನ್ನು ಹೊಂದಲು ಬೃಹತ್ ಪ್ರಮಾಣದಲ್ಲಿ ಕೈಗಾರಿಕಾಭಿವೃದ್ಧಿಯಲ್ಲಿ ತೊಡಗಬೇಕಾಯಿತು. ಈ ಕೈಗಾರಿಕೆಗಳನ್ನು ಸರಕಾರಿ ಸ್ವಾಮ್ಯದಲ್ಲಿ ಸ್ಥಾಪಿಸಲು ಅವರು ನಿರ್ಧರಿಸಿದರು. ಅಲ್ಲದೆ, ಖಾಸಗೀ ಉದ್ಯಮಕ್ಕೂ ಅವಕಾಶವನ್ನಿತ್ತರು.

ಕೈಗಾರಿಕಾ ಪ್ರಗತಿಗೆ ಮುಖ್ಯವಾದುದು ಕಬ್ಬಿಣ ಮತ್ತು ಉಕ್ಕು. ಈ ಕಾರ್ಖಾನೆಗಳಿಗೆ ಆದ್ಯತೆ ನೀಡಲಾಯಿತು. ಮಿತ್ರ ರಾಷ್ಟ್ರಗಳ ಸಹಾಯದಿಂದ ರೂರ್‌ಕೇಲ, ಭಿಲ್ಯಾ, ದುರ್ಗಾಪುರ, ಬೋಕಾರೋ, ಈ ಸ್ಥಳಗಳಲ್ಲಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಗಳು ಸ್ಥಾಪಿತವಾದವು. ಅಲ್ಲದೆ ಜಮ್‌ಷೆಡ್‌ಪುರ, ಭದ್ರಾವತಿ ಮುಂತಾದವುಗಳಲ್ಲಿರುವ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಗಳು ದೇಶದಲ್ಲಿನ ಆವಶ್ಯಕತೆಯನ್ನು ಪೂರೈಸಲು ಶ್ರಮಿಸುತ್ತಿವೆ.

ಕೈಗಾರಿಕಾ ಕ್ಷೇತ್ರದಲ್ಲಿ ಭಾರತವು ಸ್ವಾವಲಂಬಿಯಾಗಿರಬೇಕೆಂಬುದು ನೆಹರೂ ಅವರ ಆಶಯ. ಅಂತೆಯೇ ವಿದ್ಯುತ್ ಉಪಕರಣಗಳನ್ನು ತಯಾರಿಸಲು ದೊಡ್ಡ ಕಾರ್ಖಾನೆಗಳನ್ನು ಸ್ಥಾಪಿಸಿದರು. ಭೂಪಾಲಿನ ಭಾರತ್ ಹೆವಿ

ಎಲೆಕ್ಟ್ರಿಕಲ್ ಫ್ಯಾಕ್ಟರಿ, ಬೆಂಗಳೂರಿನ ಭಾರತ್ ಎಲೆಕ್ಟ್ರಾನಿಕ್ಸ್‌ಗಳಲ್ಲೂ ಅಲ್ಲದೆ ತಿರುಚಿರಾಪಳ್ಳಿ, ಹೈದರಾಬಾದು ಮೊದಲಾದ ಸ್ಥಳಗಳಲ್ಲೂ ವಿದ್ಯುತ್ ಉಪ ಕರಣಗಳ ಕಾರ್ಖಾನೆಗಳಿವೆ.

ಕಾರ್ಖಾನೆಗಳಿಗೆ ಭಾರಿ ಪ್ರಮಾಣದ ಯಂತ್ರಗಳನ್ನು ತಯಾರಿಸಲು ರಾಂಚಿಯಲ್ಲಿ ಕಾರ್ಖಾನೆ ಸ್ಥಾಪಿತವಾಗಿದೆ. ಇದೇ ದಿಸೆಯಲ್ಲಿ ಬೆಂಗಳೂರಿನ ಹಿಂದೂಸ್ಥಾನ್ ಮೆಶಿನ್ ಟೂಲ್ಸ್ ಗಣನೀಯ ಪ್ರಗತಿಯನ್ನು ಸಾಧಿಸಿದೆ.

ಆಹಾರೋತ್ಪನ್ನಗಳ ಹೆಚ್ಚುವರಿಯನ್ನು ಸಾಧಿಸಲು ಅವಶ್ಯಕವಾದ ಗೊಬ್ಬರವನ್ನು ಒದಗಿಸಲು, ಸಿಂಧ್ರಿ, ನಾಂಗಲ್, ನಾಂರೂಪ್, ನೈವೇಲಿ ಮೊದಲಾದ ಸ್ಥಳಗಳಲ್ಲಿ ರಾಸಾಯನಿಕ ಗೊಬ್ಬರ ಕಾರ್ಖಾನೆಗಳು ಸ್ಥಾಪಿತ ವಾದವು.

ಹಾಗೆಯೇ ಸಾರಿಗೆ ಅಭಿವೃದ್ಧಿಗಾಗಿ ವಿಶಾಖಪಟ್ಟಣ ಮತ್ತು ಮರ್ಮ ಗೋವಾಗಳಲ್ಲಿರುವ ಹಡಗು ನಿರ್ಮಾಣ ಕೇಂದ್ರಗಳು, ರೈಲ್ವೆ ಇಂಜಿನ್‌ಗಳ ಉತ್ಪಾದನೆಗಾಗಿ ಚಿತ್ತರಂಜನ್ ಮತ್ತು ವಾರಣಾಸಿ ಕಾರ್ಖಾನೆಗಳು, ರೈಲ್ವೆ ಬಂಡಿಗಳ ಉತ್ಪಾದನೆಗಾಗಿ ಪೆರೆಂಬೂರ್ ಮೊದಲಾದ ಕಾರ್ಖಾನೆಗಳು, ವಿಮಾನಗಳ ತಯಾರಿಕೆಗಾಗಿ ಬೆಂಗಳೂರಿನ ಹಿಂದೂಸ್ಥಾನ್ ಏರ್‌ಕ್ರಾಫ್ಟ್ ಫ್ಯಾಕ್ಟರಿ, ಕಾನ್ಪುರ, ಕೋರಾಪಟ್ ಮೊದಲಾದ ಸ್ಥಳಗಳಲ್ಲಿರುವ ಇತರೆ ಕಾರ್ಖಾನೆಗಳು ನೆಹರೂ ಅವರ ಕಾಲದಲ್ಲಿ ಜನ್ಮ ತಾಳಿದವು.

ಟೆಲಿಫೋನ್ ಸೌಕರ್ಯಗಳ ಉತ್ಪಾದನೆಗಾಗಿ ಬೆಂಗಳೂರಿನಲ್ಲಿರುವ ಇಂಡಿಯನ್ ಟೆಲಿಫೋನ್ ಇಂಡಸ್ಟ್ರೀಸ್ (I.T.I.), ಪಶ್ಚಿಮ ಬಂಗಾಳದ ರೂಪನಗರ್‌ನಲ್ಲಿರುವ ಕೇಬಲ್ ಫ್ಯಾಕ್ಟರಿಗಳು ರೂಪುತಾಳಿದವು. ಐ.ಟಿ.ಐ.ನ ಉತ್ಪನ್ನಗಳು ವಿಶ್ವದ ಮಾರುಕಟ್ಟೆಯಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿವೆ.

ಅಣು ಉತ್ಪಾದನೆಯಲ್ಲಿಯೂ ನೆಹರೂ ಅವರ ಭಾರತ ಗಣನೀಯವಾದ ಪ್ರಗತಿಯನ್ನು ಸಾಧಿಸಿತು. ಡಾ. ಭಾಭಾ ಅವರ ನೇತೃತ್ವದಲ್ಲಿ ಸ್ಥಾಪಿತ ಗೊಂಡ ಅಟಾಮಿಕ್ ಎನರ್ಜಿ ಪ್ರಾಜೆಕ್ಟ್ ಮುಂಬಯಿಯ ಸಮೀಪದಲ್ಲಿ ಟ್ರಾಂಬೆಯಲ್ಲಿ ೧೯೫೬ರಲ್ಲಿ ಸ್ಥಾಪಿತವಾಯಿತು. ಅಣುಶಕ್ತಿಯನ್ನು ಶಾಂತಿ ಯುತ ಕಾರ್ಯಗಳಿಗಾಗಿ ಬಳಸುವುದೇ ಇದರ ಉದ್ದೇಶ. ಬಾಹ್ಯಾಕಾಶ ಪರಿಶೋಧನೆಯಲ್ಲಿಯೂ ಸಹ ಭಾರತ ಕಾಲಿಟ್ಟಿದೆ. ಕೇರಳದ ತುಂಬಾ ದಲ್ಲಿರುವ ನಿಲ್ದಾಣದಿಂದ ಕ್ಷಿಪಣಿಕೆಗಳನ್ನು ಹಾರಿಸಿ ಪ್ರಯೋಗಗಳನ್ನು ನಡೆಸುತ್ತಿದೆ.

ಹೀಗೆ ನೆಹರೂ ಅವರ ದೂರಾಲೋಚನೆಯ ಫಲವಾಗಿ ಭಾರತವನ್ನು ವಿಶ್ವದ ಕೈಗಾರಿಕಾ ಭೂಪಟದಲ್ಲಿ ಗುರುತಿಸುವಂತಾಯಿತು.

## ಸಾಮಾಜಿಕ ಸುಧಾರಣೆಗಳು

ಭಾರತದಲ್ಲಿ ಹಲವು ಮೂಢನಂಬಿಕೆಗಳು ಬೇರೂರಿದ್ದವು. ಜಾತಿ ಮತ ಮತ್ತು ಲಿಂಗ ಭೇದಗಳು ಸಮಾಜದಲ್ಲಿ ಎದ್ದುಕಾಣುತ್ತಿದ್ದವು. ಸಮಾಜವು ಇದೇ ರೀತಿ ಮುಂದುವರಿಯಲು ಬಿಟ್ಟಲ್ಲಿ ದೇಶದ ಐಕ್ಯತೆಗೆ ಧಕ್ಕೆ ಬರುವುದೆಂದು ನೆಹರೂ ಅವರು ಮನಗಂಡಿದ್ದರು. ಆದ್ದರಿಂದ ಭಾರತವು ಜಾತ್ಯಾತೀತ ರಾಷ್ಟ್ರವೆಂದು ಹೊಸ ಸಂವಿಧಾನದಲ್ಲಿ ಘೋಷಿಸಲಾಯಿತು.

ಸ್ವತಂತ್ರ ಭಾರತದ ಅನೇಕ ಸಾಮಾಜಿಕ ಸುಧಾರಣೆಗಳು ಸ್ತ್ರೀಯರ ಸ್ಥಾನಮಾನಗಳನ್ನು ಉತ್ತಮ ಪಡಿಸುವ ಮತ್ತು ಅಸ್ಪೃಶ್ಯತೆಯನ್ನು ನಿವಾರಿ ಸುವ ಉದ್ದೇಶವುಳ್ಳದ್ದಾಗಿದ್ದವು. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಸ್ತ್ರೀಯರು ಮತ್ತು ಪುರುಷರು ಹೆಗಲಿಗೆ ಹೆಗಲು ಕೊಟ್ಟು ದುಡಿದಿದ್ದರಿಂದಾಗಿ ಲಿಂಗ ಭೇದವು ಹೆಚ್ಚುಮಟ್ಟಿಗೆ ನಿವಾರಣೆಯಾಯಿತು. ಸ್ವತಂತ್ರ ಭಾರತವು

ಸ್ತ್ರೀಪುರುಷರೊಂದಿಗೆ ಸಮಾನತೆಯನ್ನು ಉಂಟುಮಾಡಿದೆ. ಶಿಕ್ಷಣ ಕ್ಷೇತ್ರ ದಲ್ಲಿ ಸ್ತ್ರೀಯರಿಗೆ ಸಮಾನಾವಕಾಶ ನೀಡಿ, ಅವರ ಬೌದ್ಧಿಕ ಜಾಗೃತಿಗೆ ಅವಕಾಶ ಕಲ್ಪಿಸಲಾಯಿತು. ಮಹಿಳೆಯರಿಗೇ ಪ್ರತ್ಯೇಕ ಶಾಲಾ ಕಾಲೇಜು ಗಳನ್ನು ಸ್ಥಾಪಿಸಿ ಶಿಕ್ಷಣ ಸೌಲಭ್ಯಗಳನ್ನು ಕಲ್ಪಿಸಿಕೊಡಲಾಗಿದೆ. ಸ್ತ್ರೀಯರ ಶಾರೀರಕ ತರಬೇತಿಗೆ ಗರ್ಲ್‌ಗೈಡ್ ಚಳವಳಿ ನೆರವಾಗಿದೆ. ಬಾಲ್ಯ ವಿವಾಹವು ಗತಕಾಲದ ಕಥೆಯಾಗಿದೆ. ಘೋಷಾ ಪದ್ಧತಿ ಬಹುಪಾಲು ಮಾಯವಾಗಿದೆ. "ಹಿಂದೂ ಸ್ತ್ರೀಯರ ಆಸ್ತಿ ಸಂಪೂರ್ಣವಾಗಿ ಅವರಿಗೇ ಸೇರಿದುದು" ಎಂದು ಹಿಂದೂ ಉತ್ತರಾಧಿಕಾರದ ಕಾನೂನು ಖಚಿತಗೊಳಿಸಿದೆ.

ವಿವಾಹದ ದುಬಾರಿ ವೆಚ್ಚವನ್ನು ತಗ್ಗಿಸಲು ಹಾಗೂ ಜಾತಿ ಜಾತಿಗಳ ದೋಷಗಳನ್ನು ನಿರ್ಮೂಲಮಾಡಲು ಅಂತರ್ಜಾತೀಯ ವಿವಾಹಗಳಿಗೆ ಆದ್ಯತೆಯನ್ನು ಕೊಡಲಾಯಿತು. ಆರ್ಥಿಕ ಕೊರತೆಯನ್ನು ನೀಗಿಸಲು, ಹೆಣ್ಣುಮಕ್ಕಳ ವಿವಾಹದ ಸಮಸ್ಯೆಯನ್ನು ಬಗೆಹರಿಸಲು ಅಂತರ್ಜಾತೀಯ ವಿವಾಹ ಸೂಕ್ತವೆಂದು ಗಾಂಧೀಜಿಯವರು ಪೋಷಕರಿಗೆ ಕರೆಯಿತ್ತರು. ಹಿಂದೂ ವಿವಾಹ ಊರ್ಜಿತ ಕಾನೂನು ಅಂತರ್ಜಾತೀಯ ವಿವಾಹ ಗಳಿಸಿರುವ ಅಡ್ಡಿಯನ್ನು ತೊಡೆದುಹಾಕಿತು. ಅಕ್ಟೋಬರ್ ೧೯೫೪ರ ವಿಶೇಷ ವಿವಾಹ ಶಾಸನ ಭಾರತೀಯರು ಹೊರದೇಶದಲ್ಲಿರುವ ಭಾರತೀಯರೊಂದಿಗೆ ಧರ್ಮಭೇದ ವಿಲ್ಲದೆ ವಿವಾಹವಾಗಲು ಅವಕಾಶ ಕಲ್ಪಿಸಿದೆ. ಅಲ್ಲದೆ ೧೯೫೫ರ ಹಿಂದೂ ವಿವಾಹ ಕಾನೂನು "ಅಂತರ್ಜಾತೀಯ ವಿವಾಹ, ಹಿಂದೂ ವಿವಾಹಗಳ ನೋಂದಣಿ, ವಿವಾಹ ವಿಚ್ಛೇದ ಮತ್ತು ಪತಿ ಮತ್ತು ಸತಿಯಿಂದ ಉದರ ನಿರ್ವಾಹದ ವೆಚ್ಚದ ನೀಡಿಕೆ" ಮುಂತಾದುವುಗಳಿಗೆ ಅವಕಾಶ ನೀಡಿ ದ್ವಿಪತ್ನಿತ್ವ ವನ್ನು ಶಿಕ್ಷಾರ್ಹವಾಗಿ ಮಾಡಿದೆ.

ಸ್ವತಂತ್ರ ಭಾರತದಲ್ಲಿ ಮನುಷ್ಯನನ್ನು ಮನುಷ್ಯನಿಂದ ಪ್ರತ್ಯೇಕಿಸುವ ಕಟ್ಟುನಿಟ್ಟಿನ ನಿಯಮಗಳು ಮೌಲ್ಯವನ್ನು ಕಳೆದುಕೊಂಡಿವೆ. ಸಂವಿಧಾನದ ೧೫ನೆಯ ವಿಧಿ "ಧರ್ಮ, ಜನಾಂಗ, ಜಾತಿ, ಲಿಂಗ, ಜನ್ಮಸ್ಥಾನ ಅಥವಾ

ಇನ್ನಾವುದೇ ಭೇದದ ಆಧಾರದ ಮೇಲೆ ಸರಕಾರವು ಯಾವುದೇ ನಾಗರಿಕನ ವಿರುದ್ಧ ಪಕ್ಷಪಾತ ಮಾಡಬಾರದು" ಎಂದು ತಿಳಿಸುತ್ತದೆ.

ಸಮಾಜದಲ್ಲಿ ನಡೆದುಬಂದಿದ್ದ ಅತಿಮುಖ್ಯ ದುರಾಚಾರ ಅಸ್ಪೃಶ್ಯತೆ. ಅಸ್ಪೃಶ್ಯತಾ ನಿವಾರಣೆ ರಾಷ್ಟ್ರೀಯ ಹೋರಾಟದ ಹಿರಿಯ ಮುಖ್ಯ ಕಾರ್ಯಕ್ರಮವಾಗಿದ್ದಿತು. ಗಾಂಧೀಜಿ ಈ ಪದ್ಧತಿಯನ್ನು ಕಟುವಾಗಿ ಟೀಕಿಸಿದರು. "ಅಸ್ಪೃಶ್ಯತೆ ಸ್ವರಾಜ್ಯಕ್ಕೆ ತಡೆಹಾಕುತ್ತದೆ. ಅದರ ನಿವಾರಣೆ ಸ್ವರಾಜ್ಯಕ್ಕೆ ಅಗತ್ಯ" "ಅಸ್ಪೃಶ್ಯತೆ ಹಿಂದೂ ಧರ್ಮಕ್ಕೆ ವಿಷ ಹಾಕುತ್ತದೆ. ಆ ವಿಷವನ್ನು ನಿರ್ಮೂಲ ಮಾಡಿ" ಎಂದು ಜನತೆಯನ್ನು ಕಳಕಳಿಯಿಂದ ಕೇಳಿಕೊಂಡರು. ಸಂವಿಧಾನದ ೧೭ನೆಯ ವಿಧಿಯಂತೆ, "ಅಸ್ಪೃಶ್ಯತೆಯನ್ನು ರದ್ದು ಮಾಡಲಾಗಿದೆ. ಯಾವುದೇ ವಿಧಾನದಿಂದ ಅದನ್ನು ಆಚರಿಸುವುದನ್ನು ನಿಷೇಧಿಸಿದೆ. ಅಸ್ಪೃಶ್ಯತೆಯ ಕಾರಣದಿಂದಾಗಿ ಕಾಣಿಸಿಕೊಳ್ಳುವ ಯಾವುದೇ ರೀತಿಯ ಇತಿಮಿತಿಗಳನ್ನು ಕಾರ್ಯಾಚರಣೆಗೆ ತರುವುದು ಕಾನೂನಿನಂತೆ ಶಿಕ್ಷಾರ್ಹವಾದ ಅಪರಾಧವಾಗುವುದು."

ಹೀಗೆ ನೆಹರೂ ಕಾಲದಲ್ಲಿ ನವ ಸಮಾಜ ನಿರ್ಮಾಣ ಕಾರ್ಯವು ತ್ವರಿತ ಗತಿಯಿಂದ ಸಾಗಿತು.

## ವಿದೇಶಾಂಗ ನೀತಿ

"ನೆಹರೂ ತಲೆಮಾರಿನಲ್ಲಿ, ಒಳಿತಿಗಾಗಲೀ ಅಥವಾ ಕೆಟ್ಟದ್ದಕ್ಕಾಗಲೀ, ವಿಶ್ವವು ಒಂದಾಗಿ ಬೆಳೆಯುತ್ತಿದ್ದಿತು. ವಿಶ್ವವನ್ನು ತಮ್ಮ ಕಾರ್ಯಕ್ಷೇತ್ರವಾಗಿ ಮಾಡಿದವರಲ್ಲಿ ನೆಹರೂ ಮೊದಲಿಗರು" ಎಂದು ವಿಶ್ವವಿಖ್ಯಾತ ಚರಿತ್ರಕಾರ ಆರ್ನಾಲ್ಡ್ ಟಾಯನ್‌ಬೀ ಯವರು ಹೇಳಿದ್ದಾರೆ. ನೆಹರೂರ ದೃಷ್ಟಿ ವಿಶ್ವದಲ್ಲಿ ಅಡಕವಾಗಿದ್ದಿತು. ತಮ್ಮ ಜನತೆಯ ಹಾಗೂ ವಿಶ್ವದ ಎಲ್ಲಾ ಜನತೆಯ ಸ್ವಾತಂತ್ರ್ಯ ಮತ್ತು ಮಾನವನ ಘನತೆಗೆ ತಮ್ಮ ಜೀವನದ

ಪರ್ಯಂತವೂ ಅವರು ಹೋರಾಡಿದರು. ರಾಷ್ಟ್ರೀಯ ಹಾಗೂ ಅಂತರ ರಾಷ್ಟ್ರೀಯ ವಿವಾದಗಳನ್ನು ಶಾಂತಿಯುತ ರೀತಿಯಲ್ಲಿ ಬಗೆಹರಿಸಿಕೊಳ್ಳಬೇಕೆಂದು ಕರೆಕೊಟ್ಟವರಲ್ಲಿ ಅಶೋಕನ ನಂತರ ಅವರೇ ಮೊದಲಿಗರಾಗಿದ್ದರು. ಶಾಂತಿದೂತ ಗಾಂಧೀಜಿಯವರ ಉತ್ತರಾಧಿಕಾರಿಯಾದ ಅವರ ರಕ್ತನಾಡಿಯಲ್ಲಿ ಶಾಂತಿಯ ಕಲ್ಪನೆ ಹರಿಯುತ್ತಿದುದು ಸಹಜ.

ನೆಹರೂ ಪ್ರಧಾನ ಮಂತ್ರಿಯಾದ ಕೂಡಲೆ ಭಾರತದ ವಿದೇಶಾಂಗ ನೀತಿಯ ರೂಪರೇಖೆಗಳನ್ನು ತಯಾರಿಸಿದರು. ನಾಗರಿಕತೆಯನ್ನು ಪರಮಾಣು ಅಸ್ತ್ರಗಳಿಂದ ರಕ್ಷಿಸುವುದು, ನೆಲಸುನಾಡಿನ ಪದ್ಧತಿಯನ್ನು ವಿರೋಧಿಸುವುದು, ಏಶಿಯ ಮತ್ತು ಆಫ್ರಿಕಾ ದೇಶಗಳ ಜನತೆಯೊಂದಿಗೆ ನಿಕಟಸಂಪರ್ಕ ಬೆಳೆಸುವುದು, ಮತ್ತು ಇನ್ನೂ ಪರಾಧೀನತೆಯಲ್ಲಿ ತೊಳಲುತ್ತಿದ್ದ ಸಣ್ಣಪುಟ್ಟ ದೇಶಗಳ ಸ್ವಾತಂತ್ರ್ಯಧ್ಯೇಯಗಳನ್ನು ಎತ್ತಿ ಹಿಡಿಯುವುದು ಇವು ಈ ನೀತಿಯ ಧೋರಣೆಗಳಾಗಿದ್ದವು.

ಅಲ್ಲದೆ ಪಂಚಶೀಲ ಧೋರಣೆಯನ್ನು ರೂಪಿಸಿದವರೂ ಅವರೇ. ಒಬ್ಬರು ಮತ್ತೊಬ್ಬರ ರಾಜ್ಯದ ಸಮಗ್ರತೆ ಹಾಗೂ ಸ್ವಾಮ್ಯವನ್ನು ಆದರಿಸುವುದು, ಆಕ್ರಮಣ ಮಾಡದಿರುವುದು, ಆಂತರಿಕ ವ್ಯವಹಾರದಲ್ಲಿ ಕೈಹಾಕದಿರುವುದು, ಪರಿಸಮಾನತೆ, ಶಾಂತಿಯುತ ಸಹಜೀವನ ಇವೇ ಆ ಪಂಚಶೀಲಗಳು. ಈ ತತ್ವಗಳನ್ನು ವಿಶ್ವದ ಮೂವತ್ತು ರಾಷ್ಟ್ರಗಳು ಅನುಮೋದಿಸಿದವು.

## ಅಂತರರಾಷ್ಟ್ರೀಯ ದೃಷ್ಟಿ

ನೆಹರೂ ಅವರ ಮಾರ್ಗದರ್ಶನದಲ್ಲಿ ಭಾರತ ವಿಶ್ವಶಾಂತಿಗಾಗಿ ಅನೇಕ ಅಂತರರಾಷ್ಟ್ರೀಯ ಜವಾಬ್ದಾರಿಗಳನ್ನು ವಹಿಸಿಕೊಂಡಿತು. ನೆಹರೂ ಅವರ ಶಾಂತಿಧೋರಣೆಯನ್ನು ಮೆಚ್ಚಿದ ಗಾಂಧೀಜಿ ಅವರನ್ನು ಈ ರೀತಿ ವರ್ಣಿಸಿದ್ದಾರೆ. "ಪಂಡಿತ್ ಜವಹರ್‌ಲಾಲ್ ನೆಹರೂ ಅವರು ಸಾಚಾ ಭಾರತೀಯ

ರಾಗಿದ್ದಾರೆ. ಆದರೆ ಅವರು ಅಂತರರಾಷ್ಟ್ರೀಯವಾದಿಯೂ ಆಗಿರುವುದರಿಂದ ಎಲ್ಲಾ ವಿಚಾರಗಳನ್ನು ನಾವು ಕಿರಿದಾದ ದೃಷ್ಟಿಯಿಂದ ನೋಡುವುದರ ಬದಲು ಅಂತರರಾಷ್ಟ್ರೀಯ ಬೆಳಕಿನಲ್ಲಿ ನೋಡುವಂತೆ ಮಾಡಿದ್ದಾರೆ. ಅವರು ಮಾನವ ಹಿತೋತ್ಸಾಹಿ; ತಪ್ಪು ಎಲ್ಲಿ ನಡೆದರೂ ಪ್ರತಿಕ್ರಿಯೆ ತೋರಿಸುತ್ತಾರೆ. ನಾನು ಇಲ್ಲವಾದಾಗ ಹೇಗೆ ಈ ಕಾರ್ಯವನ್ನು ಮುಂದುವರಿಸಬೇಕೆಂಬುದು ಅವರಿಗೆ ಗೊತ್ತಾಗುತ್ತದೆ."

## ಎರಡು ಬಗೆದ ಚೈನಾ

ಸ್ನೇಹದಿಂದಿದ್ದ ಚೈನಾದೇಶ ಹಿಂದೂಸ್ಥಾನಕ್ಕೆ ಎರಡು ಬಗೆಯಿತು. ವಿನಾ ಕಾರಣ ಭಾರತದ ಮೇಲೆ ೧೯೬೨ರಲ್ಲಿ ಯುದ್ಧ ಹೂಡಿತು. ಯುದ್ಧಕ್ಕೆ ಸಿದ್ಧವಾಗಿರದಿದ್ದ ಭಾರತದ ಸೈನ್ಯ ಪರಿಣಾಮಕಾರಿಯಾಗಿ ಹೋರಾಡಲು ಸಾಧ್ಯವಾಗದಾಯಿತು. ಆದರೆ ಚೀನಿಯರ ಕದನವಿರಾಮ ಘೋಷಣೆಯೊಂದಿಗೆ ಯುದ್ಧವು ನಿಂತಿತು. ಆದರೂ ಚೀಣಾ ಭಾರತವನ್ನು ಪದೇ ಪದೇ ವಂಚಿಸುತ್ತಿದೆ.

## ನೆಹರೂ ವ್ಯಕ್ತಿತ್ವ

ತಮ್ಮ ಮರಣದ ತನಕ (ಮೇ ೨೭, ೧೯೬೪) ನೆಹರೂ ಭಯ ಮತ್ತು ಬಡತನಗಳಿಂದ ಮುಕ್ತವಾದ ತಮ್ಮ ಕನಸಿನ ಸಮೃದ್ಧ ಭಾರತದ ನಿರ್ಮಾಣಕ್ಕಾಗಿ ಹಗಲೂ ಇರುಳೂ ದುಡಿದರು. ಅವರಲ್ಲಿ "ಭಾರತದ ಪ್ರಾಚೀನ ಕಾಲದ ಜ್ಞಾನ, ಮಧ್ಯಕಾಲದ ಶ್ರದ್ಧೆ, ಭಕ್ತಿ ಮತ್ತು ಆಧುನಿಕ ಕಾಲದ ವೈಜ್ಞಾನಿಕ ಪ್ರಜ್ಞೆ" ಇವು ಮೂರೂ ಮೂರ್ತಗೊಂಡಿದ್ದವು. ಅವರು ಪ್ರಭಾವಶಾಲಿ ಲೇಖಕರಾಗಿದ್ದರು. ಅವರ ಬಹು ಮುಖ್ಯ ಗ್ರಂಥಗಳಾದ ಭಾರತದರ್ಶನ, ಮಗಳಿಗೆ ತಂದೆಯ ಓಲೆಗಳು, ಆತ್ಮಚರಿತ್ರೆ ವಿಶ್ವದ ಸಾಹಿತ್ಯದಲ್ಲಿ ತನ್ನವೇ ಆದ ಸ್ಥಾನವನ್ನು ಪಡೆದಿವೆ. ಅವರು ಪ್ರಸಿದ್ಧವಾಗ್ಮಿಗಳಾಗಿದ್ದರು.

ಲಕ್ಷೋಪಲಕ್ಷ ಜನರನ್ನು ಆಕರ್ಷಿಸುವ ಅಸಾಧಾರಣ ಶಕ್ತಿ ಮತ್ತು ವ್ಯಕ್ತಿತ್ವ ಅವರಲ್ಲಿ ಮನೆಮಾಡಿಕೊಂಡಿದ್ದಿತು. ಚಾಚಾ (ಚಿಕ್ಕಪ್ಪ) ನೆಹರೂ ಅವರಿಗೆ ಮಕ್ಕಳೆಂದರೆ ಬಹುಪ್ರೀತಿ. ಕಾರ್ಯದ ಒತ್ತಡದಲ್ಲೂ ಬಿಡುವು ಮಾಡಿಕೊಂಡು ಮಕ್ಕಳೊಂದಿಗೆ ಆಡಿ ನಲಿಯುತ್ತಿದ್ದರು. ಅವರ ಹುಟ್ಟು ಹಬ್ಬವನ್ನು ನವೆಂಬರ್ ೧೪ರಂದು '**ಮಕ್ಕಳ ದಿನ**'ವಾಗಿ ಇಂದಿಗೂ ಆಚರಿಸಲಾಗುತ್ತಿದೆ.

## ಲಾಲ್ ಬಹದ್ದೂರ್ ಶಾಸ್ತ್ರಿ

ನೆಹರೂರ ನಿಧನದನಂತರ ಅವರ ಸಮೀಪವರ್ತಿಗಳೂ, ಅವರ ರಾಜಕೀಯ ಗರಡಿಯಲ್ಲಿ ನುರಿತವರೂ ಆದ ಲಾಲ್ ಬಹದ್ದೂರ್ ಶಾಸ್ತ್ರಿಯವರು ಜೂನ್ ೧೯೬೪ರಲ್ಲಿ ಭಾರತದ ಪ್ರಧಾನ ಮಂತ್ರಿಯಾಗಿ ಆಡಳಿತವನ್ನು ವಹಿಸಿಕೊಂಡರು.

ಶಾಲಾ ಉಪಾಧ್ಯಾಯರ ಮಗನಾದ ಅವರು ಬಡತನದಲ್ಲಿ ಹುಟ್ಟಿ ಬೆಳೆದರು. ಹುಟ್ಟಿದ ಒಂದೂವರೆ ವರ್ಷದಲ್ಲಿಯೇ ತಂದೆಯನ್ನು ಕಳೆದುಕೊಂಡರು. ಕಷ್ಟದಿಂದ ವಿದ್ಯಾಭ್ಯಾಸ ಮಾಡಿ ರಾಷ್ಟ್ರೀಯ ವಿಶ್ವವಿದ್ಯಾನಿಲಯವಾದ ಕಾಶೀ ವಿದ್ಯಾಪೀಠದಲ್ಲಿ 'ಶಾಸ್ತ್ರಿ' ಪದವಿಯನ್ನು ಪಡೆದರು. ಅನಂತರ ನೆಹರೂ ಅವರ ಜೊತೆಯಲ್ಲಿ ಕಾರ್ಯತತ್ಪರರಾದರು.

## ನೆಹರೂ ಧೋರಣೆಯ ಪ್ರತಿಪಾದನೆ

ಲಾಲ್ ಬಹದ್ದೂರರು ನೆಹರೂ ಧೋರಣೆಯ ಪ್ರತಿಪಾದಕರಾಗಿದ್ದರು. ರೈತರ ಹಿತವನ್ನು ಸಾಧಿಸಲು, 'ಜೈ ಕಿಸಾನ್' (ರೈತರಿಗೆ ಜಯ) ಎಂಬ ಘೋಷಣೆಯನ್ನೂ ರೂಪಿಸಿದರು. ೧೯೬೫ರ ಆಗಸ್ಟ್–ಸೆಪ್ಟಂಬರ್‌ನಲ್ಲಿ ಉಂಟಾದ ಭಾರತ ಪಾಕಿಸ್ತಾನದ ಯುದ್ಧವನ್ನು ದಿಟ್ಟತನದಿಂದ ಎದುರಿಸಿದರು.

ಪಾಕಿಸ್ತಾನವು ಸೋಲನ್ನೊಪ್ಪಿತು. ಆದರೂ ಲಾಲ್‌ಬಹದ್ದೂರರು ನೆರೆರಾಷ್ಟ್ರಗಳೊಂದಿಗೆ ಶಾಂತಿಯುತವಾಗಿ ಬಾಳಲು ಇಚ್ಛಿಸಿದರು. ರಷ್ಯದ ಪ್ರಧಾನಿಯವರ ಆಹ್ವಾನದ ಮೇರೆಗೆ ತಾಷ್ಕೆಂತ್‌ಗೆ ತೆರಳಿ ಪಾಕಿಸ್ತಾನದ ಅಧ್ಯಕ್ಷ ಅಯೂಬ್‌ಖಾನ್‌ರೊಂದಿಗೆ ಮಾತುಕತೆ ನಡೆಸಿ ಶಾಂತಿ ಒಪ್ಪಂದಕ್ಕೆ ಜನವರಿ ೧೦, ೧೯೬೬ರಲ್ಲಿ ಸಹಿ ಹಾಕಿದರು. ಒಪ್ಪಂದಕ್ಕೆ ಸಹಿ ಹಾಕಿದ ರಾತ್ರಿಯೇ ಅವರು ಮಡಿದರು.

## ಶ್ರೀಮತಿ ಇಂದಿರಾ ಗಾಂಧಿ

ಅನಂತರ ಶ್ರೀಮತಿ ಇಂದಿರಾ ಪ್ರಿಯದರ್ಶಿನಿ ಗಾಂಧಿಯವರು ಭಾರತದ ಪ್ರಧಾನ ಮಂತ್ರಿಯಾಗಿ ಆಯ್ಕೆಗೊಂಡು ಮುಂದುವರಿದಿದ್ದಾರೆ. ನೆಹರೂ ಅವರ ಪ್ರೇಮದ ಕುವರಿ. ಎಳೆಯತನದಿಂದಲೂ ಅವರು ಗಾಂಧೀಜಿಯವರ ನಿಕಟಸಂಪರ್ಕದಲ್ಲಿ ಬೆಳೆದರು. ಅವರಿಗೆ ತಮ್ಮ ಮನೆಯವರೆಲ್ಲರೂ ರಾಷ್ಟ್ರೀಯ ಆಂದೋಳನದಲ್ಲಿ ಧುಮುಕಿದ್ದರಿಂದ, ದೇಶಪ್ರೇಮ ವಂಶಾನುಗತವಾಗಿ ರಕ್ತಗತವಾಗಿ ಬಂದಿದೆ. ಚಿಕ್ಕಂದಿನಿಂದಲೂ ತಮ್ಮದೇ ಆದ ರೀತಿಯಲ್ಲಿ ದೇಶಸೇವೆಯಲ್ಲಿ ಸದಾ ತತ್ಪರರಾಗುತ್ತ ಬೆಳೆದು ಬಂದಿದ್ದಾರೆ.

ನೆಹರೂ ಪ್ರಧಾನ ಮಂತ್ರಿಯಾದಮೇಲೆ ಉಚ್ಚ ರಾಜಕೀಯ ಶಿಕ್ಷಣದ ಲಾಭ ಇವರಿಗೆ ದೊರೆಯಿತು. ಅವರೊಡನೆ ಹೊರದೇಶಗಳಲ್ಲಿ ಸಂಚರಿಸಿ ವಿವಿಧ ಆಡಳಿತ ಪದ್ಧತಿಗಳನ್ನು ಅರಿತುಕೊಂಡರು. ಪೌರಸ್ತ್ಯ ಹಾಗು ಪಾಶ್ಚಿಮಾತ್ಯ ನಾಗರಿಕತೆಗಳನ್ನು ಅಭ್ಯಾಸಮಾಡಿ ಅವುಗಳ ಮೌಲ್ಯಗಳನ್ನು ಕಂಡುಕೊಂಡರು. ಕಾಂಗ್ರೆಸ್ಸಿನ ಅಧ್ಯಕ್ಷಿಣಿಯಾದಾಗಿನಿಂದಲೂ ಅವರಿಗೆ ಭಾರತದ ವಿವಿಧ ರಾಜ್ಯಗಳ ರಾಜಕೀಯವೆಲ್ಲ ಕರತಲಾಮಲಕವಾಗಿದೆ. ಹೀಗೆ ದೇಶ ವಿದೇಶಗಳ ಗಾಢ ಪರಿಚಯವುಳ್ಳ ಇವರ ಪ್ರತಿಭೆಯನ್ನು ದೇಶೋದ್ಧಾರಕ್ಕಾಗಿ ವಿನಿಯೋಗಿಸಲು ಲಾಲ್ ಬಹದ್ದೂರ್ ತಮ್ಮ ಮಂತ್ರಿ

ಮಂಡಲವನ್ನು ಸೇರುವಂತೆ ಆಹ್ವಾನಿಸಿದಾಗ ಶ್ರೀಮತಿ ಗಾಂಧಿಯವರು ಕೇಂದ್ರ ಮಂತ್ರಿ ಮಂಡಲವನ್ನು ಪ್ರವೇಶಿಸಿದರು.

ಲಾಲ್ ಬಹದ್ದೂರರ ಮರಣದನಂತರ ಪಾರ್ಲಿಮೆಂಟಿನಲ್ಲಿ ಕಾಂಗ್ರೆಸ್ ನಾಯಕತ್ವಕ್ಕೆ ನಡೆದ ತೀವ್ರ ಸ್ಪರ್ಧೆಯಲ್ಲಿ ಜಯಗಳಿಸಿ ಪ್ರಧಾನಿಯಾದರು. ಸ್ವತಂತ್ರ ಭಾರತದ ಸ್ತ್ರೀಯೊಬ್ಬರು ಈ ಸ್ಥಾನವನ್ನು ಅಲಂಕರಿಸುವುದರಲ್ಲಿ ಇವರೇ ಮೊದಲಿಗರು! ವಿಶ್ವದ ಇತಿಹಾಸದಲ್ಲಿ ಇವರು ಎರಡನೆಯ ಪ್ರಧಾನ ಸಚಿವೆಯಾಗಿದ್ದಾರೆ.

## ಆಡಳಿತ ಕಾಂಗ್ರೆಸ್ ನಿರ್ಮಾಣ

ಶ್ರೀಮತಿ ಗಾಂಧಿಯವರು ತಮ್ಮ ತಂದೆಯಂತೆಯೇ ನಿಜವಾದ ಸಮಾಜ ವಾದಿಯಾಗಿದ್ದಾರೆ. ಬಡವ ಬಲ್ಲಿದರಲ್ಲಿರುವ ತಾರತಮ್ಯವನ್ನು ನೀಗಿಸಲು ಶರಲುದ್ದೇಶಿಸಿದ ಬ್ಯಾಂಕ್ ರಾಷ್ಟ್ರೀಕರಣ ಮತ್ತು ರಾಜಮಹಾರಾಜರುಗಳ ವಿಶೇಷ ಸವಲತ್ತುಗಳ ರದ್ದತಿ ಇವುಗಳ ಕಾರಣದಿಂದಾಗಿ ಕಾಂಗ್ರೆಸ್ ಸಂಸ್ಥೆ ಮತ್ತು ಕಾಂಗ್ರೆಸ್ ಆಡಳಿತವರ್ಗ ಇವುಗಳಲ್ಲಿ ಭಿನ್ನಾಭಿಪ್ರಾಯ ಮತ್ತು ಮನಸ್ತಾಪ ಗಳು ಉಂಟಾದವು. ಈ ಮನಸ್ತಾಪ ಹೊಗೆಯಾಡಲಾರಂಭಿಸಿ ಕೊನೆಯಲ್ಲಿ ಕಾಂಗ್ರೆಸ್ ಸಂಸ್ಥಾ ಕಾಂಗ್ರೆಸ್ ಮತ್ತು ಆಡಳಿತ ಕಾಂಗ್ರೆಸ್ ಎಂದು ಇಬ್ಭಾಗ ವಾಯಿತು. ಶ್ರೀಮತಿ ಗಾಂಧಿಯವರು ಆಡಳಿತ ಕಾಂಗ್ರೆಸ್ಸಿನ ನಾಯಿಕೆ ಯಾದರು. ಈ ಒಡಕಿನಿಂದ ಪಾರ್ಲಿಮೆಂಟಿನಲ್ಲಿ ಕಾಂಗ್ರೆಸ್ ಸದಸ್ಯತ್ವ ಕುಗ್ಗಿತು. ಆಡಳಿತ ನಿರ್ವಹಣೆಗೆ ಇತರ ಪಕ್ಷಗಳನ್ನು ಅವಲಂಬಿಸುವುದು ಅನಿವಾರ್ಯವಾಯಿತು. ಇಂಥ ಪರಿಸ್ಥಿತಿಯಲ್ಲೂ ಶ್ರೀಮತಿ ಗಾಂಧಿಯವರು ಎಷ್ಟೂ ಧೈರ್ಯಗೆಡದೆ ತಮ್ಮ ಧೋರಣೆಗಳನ್ನು ಜನತೆಯ ಮುಂದಿಟ್ಟು, ಅವರ ಒಪ್ಪಿಗೆಯನ್ನು ಪಡೆಯಲೋಸುಗ ಸಾರ್ವತ್ರಿಕ ಚುನಾವಣೆಗಳನ್ನು ವ್ಯವಸ್ಥೆಗೊಳಿಸಿದರು. ಈ ಚುನಾವಣೆಯಲ್ಲಿ ಆಡಳಿತ ಕಾಂಗ್ರೆಸ್ಸಿನ ಸ್ಪರ್ಧಿಗಳು

ಪ್ರಬಲ ಬಹುಮತದಿಂದ ಪಾರ್ಲಿಮೆಂಟಿಗೆ ಆರಿಸಿಬಂದರು. ಶ್ರೀಮತಿ ಗಾಂಧಿಯವರು ಪುನಃ ನಾಯಕತ್ವಕ್ಕೆ ಸರ್ವಾನುಮತದಿಂದ ಆಯ್ಕೆಗೊಂಡು ಪ್ರಧಾನಿಯಾಗಿದ್ದಾರೆ.

## ಸ್ವಾವಲಂಬನೆಯ ಸಾಧನೆ

ಭಾರತವು ತನ್ನ ಕಾಲಮೇಲೆ ತಾನು ನಿಂತುಕೊಳ್ಳಬೇಕೆಂಬುದು ಶ್ರೀಮತಿ ಗಾಂಧಿಯವರ ಧ್ಯೇಯ. ಸಮೃದ್ಧರಾಷ್ಟ್ರಗಳಿಂದ ಸಹಾಯ ಒದಗಲಿ ಅಥವಾ ಬಿಡಲಿ ದೇಶದ ಪ್ರಗತಿ ಮಾತ್ರ ಮುಂದುವರಿಯಬೇಕೆಂಬುದು ಅವರ ಛಲ. ರಾಷ್ಟ್ರದ ಸಂಪನ್ಮೂಲಗಳನ್ನು ಕ್ರೋಡೀಕರಿಸಿ, ಅವನ್ನು ದೇಶದ ಅಭಿವೃದ್ಧಿಗೆ ಬಳಸಬೇಕೆಂಬ ಉದ್ದೇಶದಿಂದ ಬ್ಯಾಂಕ್ ರಾಷ್ಟ್ರೀಕರಣವನ್ನು ಮಾಡಿದರು. ರೈತರಿಗೆ, ಸಣ್ಣ ವ್ಯಾಪಾರಿಗಳಿಗೆ, ಕೈಕಸುಬಿನಿಂದ ಜೀವಿಸುವವರಿಗೆ ಮತ್ತಿತರ ಕಸುಬಿನವರಿಗೆ ಕಡಿಮೆ ಬಡ್ಡಿ ದರದಲ್ಲಿ ಸಕಾಲಿಕ ಸಾಲ ಒದಗಿಸುವುದು ಬ್ಯಾಂಕ್ ರಾಷ್ಟ್ರೀಕರಣದ ಉದ್ದೇಶಗಳಲ್ಲೊಂದಾಗಿತ್ತು. ದೇಶದಲ್ಲಿ 'ಹಸಿರುಕ್ರಾಂತಿ'ಗೂ ಅವರು ಶ್ರಮಿಸುತ್ತಿದ್ದಾರೆ. ಅವರ ಈ ಶ್ರಮದಿಂದಾಗಿ ಭಾರತವು ಆಹಾರ ಪದಾರ್ಥಗಳಲ್ಲಿ ಸ್ವಾವಲಂಬಿಯಾಗಿದೆ. ಇಷ್ಟುಮಾತ್ರವಲ್ಲ, ಪರ ರಾಷ್ಟ್ರಗಳಿಗೆ ಸಣ್ಣ ಪ್ರಮಾಣದಲ್ಲಿ ರಫ್ತು ಮಾಡುವ ಯೋಗ್ಯತೆಯನ್ನೂ ಭಾರತ ಪಡೆಯುತ್ತಲಿದೆ.

ಶ್ರೀಮತಿ ಗಾಂಧಿಯವರಿಗೆ ಬರೀ ಘೋಷಣೆಯಲ್ಲಿ ನಂಬುಗೆಯಿಲ್ಲ. ಅದನ್ನು ಪ್ರಾಮಾಣಿಕವಾಗಿ ಕಾರ್ಯರೂಪಕ್ಕೆ ತರಬೇಕೆಂಬುದು ಅವರ ದೃಢವಾದ ಮತ. ಇಲ್ಲಿಯವರೆಗೂ "ಉಳುವವನಿಗೇ ಭೂಮಿ" ಎಂಬುದು ಘೋಷಣೆಯಲ್ಲಿ ಮಾತ್ರ ಕನಸಾಗಿಯೇ ಉಳಿದಿತ್ತು. ಇದು ಈಗ ನನಸಾಗುವ ಕಾಲಬಂದಿದೆ. ಭೂಸುಧಾರಣೆಗೆ ಇಂದು ಎಂದಿಲ್ಲದ ಮಹತ್ವ ಕೊಡಲಾಗಿದೆ. ನಗರ ಆಸ್ತಿಪಾಸ್ತಿಗಳ ಮಿತಿ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಭೂಮಿತಿ

ವಿಧಿಸಲು ಶಾಸನಗಳು ರೂಪುಗೊಳ್ಳುತ್ತಿವೆ. ಉಳುವವನೇ ಭೂಮಿಯ ಒಡೆಯನಾಗುವ ಕಾಲ ಸನ್ನಿಹಿತವಾಗುತ್ತಿದೆ.

ಕೈಗಾರಿಕಾ ಕ್ಷೇತ್ರದಲ್ಲಿ ಸ್ವಾವಲಂಬಿಯಾಗುವ ಯತ್ನ ತ್ವರಿತ ಗತಿಯಿಂದ ಸಾಗಿದೆ. ಕಬ್ಬಿಣ ಮತ್ತು ಉಕ್ಕಿನ ಪೂರೈಕೆಗಾಗಿ ಮೈಸೂರಿನ ವಿಜಯನಗರ, ತಮಿಳು ನಾಡಿನ ಸೇಲಂ, ಆಂಧ್ರ ಪ್ರದೇಶದ ವಿಶಾಖಪಟ್ಟಣ ಮುಂತಾದ ಸ್ಥಳಗಳಲ್ಲಿ ಸಣ್ಣ ಪ್ರಮಾಣದ ಕಾರ್ಖಾನೆಗಳನ್ನು ಸ್ಥಾಪಿಸಲು ಕೇಂದ್ರ ಸರಕಾರ ಅನುಮತಿ ನೀಡಿದೆ. ಈ ತೆರದ ಜಾಗೃತಿಯನ್ನು ಇತರ ಕ್ಷೇತ್ರ ಗಳಲ್ಲಿಯೂ ಕಾಣುತ್ತೇವೆ.

## ಶಾಂತಿಪ್ರಿಯತೆ

ಶ್ರೀಮತಿ ಗಾಂಧಿಯವರು ಮುಖ್ಯವಾಗಿ ಶಾಂತಿಪ್ರಿಯರು. ಶಾಂತಿ ಮಂತ್ರ ಅವರಲ್ಲಿ ರಕ್ತಗತವಾಗಿ ಬಂದಿದೆ. ಆದರೆ ಶಾಂತಿ ಪಾಲನೆಗೆ ಕೆಲವು ಸಂದರ್ಭಗಳಲ್ಲಿ ಯುದ್ಧವು ಅನಿವಾರ್ಯವೆಂಬುದೂ ಅವರ ಮತ. ಇದರ ಪರೀಕ್ಷೆಯ ಸನ್ನಿವೇಶ ಬಂಗ್ಲಾದೇಶದ ರಾಷ್ಟ್ರೀಯ ಹೋರಾಟದೊಂದಿಗೆ ಬಂದಿತು.

ಪಾಕಿಸ್ತಾನದ ಸಾರ್ವತ್ರಿಕ ಚುನಾವಣೆಯಲ್ಲಿ ಬಹುಮತ ಗಳಿಸಿದ ಅವಾಮಿ ಲೀಗ್ ಪಕ್ಷದ ನಾಯಕ ಷೇಕ್ ಮುಜೀಬೂರ್ ರೆಹಮಾನ್ ಅವರು ಸರಕಾರ ರಚಿಸಲು ಪಾಕಿಸ್ತಾನದ ಅಧ್ಯಕ್ಷ ಯಾಹ್ಯಾಖಾನ್ ನಿರಾಕರಿ ಸಿದಾಗ ಪೂರ್ವ ಬಂಗಾಳದಲ್ಲಿ ಕ್ಷೋಭೆಯುಂಟಾಯಿತು. ಪಶ್ಚಿಮ ಪಾಕಿ ಸ್ತಾನೀ ಸೈನಿಕರ ಪಾಶವೀಕೃತ್ಯಕ್ಕೆ ಒಳಗಾದ ಪೂರ್ವ ಬಂಗಾಲೀ ಜನತೆ ಭಾರತಕ್ಕೆ ನಿರಾಶ್ರಿತರಾಗಿ ಬಂದರು. ೧ ಕೋಟಿಗೂ ಮಿಕ್ಕಿ ಬಂದ ನಿರಾಶ್ರಿತರ ವಸತಿ, ಬಟ್ಟೆ ಹಾಗೂ ಆಹಾರ ಪೂರೈಕೆಯ ಜವಾಬ್ದಾರಿಯನ್ನು ಭಾರತವು ಮಾನವೀಯತಾದೃಷ್ಟಿಯಿಂದ ನಿರ್ವಹಿಸಬೇಕಾಯಿತು. ಆಳುಕಿನ ರಾಜ

ಕಾರಿಣಿ ಧೃತಿಗೆಡುತ್ತಿದ್ದುದು ನಿಜ. ಭಾರತದ ಅದೃಷ್ಟವೊ ಎಂಬಂತೆ ಧೀರೆಯೂ, ನ್ಯಾಯಕ್ಕೋಸುಗ ಛಲವಂತೆಯೂ ಆಗಿದ್ದ ಶ್ರೀಮತಿ ಗಾಂಧಿಯವರು ಸ್ವಲ್ಪವೂ ಹಿಂಜರಿಯದೆ ಕಾರ್ಯತತ್ಪರರಾದರು. ವಿದೇಶಗಳ ಗಮನವನ್ನು ಈ ಪಾಶವೀಕೃತ್ಯಗಳತ್ತ ಸೆಳೆದರು. ಪ್ರಜಾಸತ್ತೆಯ ಪ್ರತೀಕದಂತಿದ್ದ ಅಮೇರಿಕವು ಜನತೆಯ ಆಶೋತ್ತರಗಳನ್ನು ಮೆಟ್ಟಿಹಾಕುವ ಸೈನಿಕ ಸರಕಾರ ವಾಗಿದ್ದ ಪಾಕಿಸ್ತಾನಕ್ಕೆ ಬೆಂಬಲವಿತ್ತಿತು. ಪಾಕಿಸ್ತಾನ ಯುದ್ಧ ಸಿದ್ಧತೆಗಳಲ್ಲಿ ತೊಡಗಿತು. ಶ್ರೀಮತಿ ಗಾಂಧಿಯವರು ರಷ್ಯದೊಂದಿಗೆ ಮೈತ್ರೀ ಒಪ್ಪಂದ ಮಾಡಿಕೊಂಡು ಭಾರತಕ್ಕೊದಗಿದ್ದ ವಿಷಮಸ್ಥಿತಿಯನ್ನು ಪರಿಹರಿಸಿದುದಲ್ಲದೆ ತಮ್ಮ ರಾಜಕಾರಣ ಪಟುತ್ವದಿಂದ ಇಡಿಯ ಜಗತ್ತನ್ನೇ ಚಕಿತಗೊಳಿಸಿದರು!

## ಭಾರತ-ಪಾಕಿಸ್ತಾನ್ ಮೂರನೆ ಯುದ್ಧ

ಏನೂ ಪ್ರಚೋದನೆಯಿಲ್ಲದೆ ಪಾಕಿಸ್ತಾನ ಭಾರತದೊಂದಿಗೆ ಮೂರನೆಯ ಬಾರಿ ಯುದ್ಧ ಹೂಡಿತು. ಭಾರತದ ಪಶ್ಚಿಮ ಪ್ರದೇಶಗಳ ಮೇಲೆ, ನಾಗರಿಕರ ನೆಲೆಯನ್ನೂ ಲೆಕ್ಕಿಸದೆ, ಬಾಂಬುದಾಳಿಗಳನ್ನಾರಂಭಿಸಿತು. ಶ್ರೀಮತಿ ಗಾಂಧಿ ಯವರು ಬಂಗ್ಲಾದೇಶವನ್ನು ಸ್ವತಂತ್ರ ರಾಷ್ಟ್ರವೆಂದು ಮಾನ್ಯಮಾಡಿ, ಅಲ್ಲಿಯ ಹೋರಾಟಗಾರರಾಗಿದ್ದ ದೇಶಪ್ರೇಮೀ ಮುಕ್ತಿವಾಹಿನಿಗೆ ಸಕಲ ನೆರವನ್ನೂ ನೀಡುವುದಾಗಿ ಘೋಷಿಸಿ, ಪೂರ್ವ ಮತ್ತು ಪಶ್ಚಿಮ ವಲಯಗಳಲ್ಲಿ ಯುದ್ಧ ಪ್ರಾರಂಭಿಸಿದರು. ಭೂ, ವಾಯು, ನೌಕಾದಳಗಳ ಒಕ್ಕೂಟದ ಅಪ್ರತಿಮ ಕಾರ್ಯಾಚರಣೆಯಿಂದ ಪಾಕಿಸ್ತಾನದ ಸೇನೆಯನ್ನು ಸದೆಬಡಿಯಲಾಯಿತು. ಪಾಕಿಸ್ತಾನ ಅಮೇರಿಕೆಯಿಂದ ಪಡೆದಿದ್ದ ಅತ್ಯಾಧುನಿಕ ಮಿಲಿಟರಿ ವಿಮಾನಗಳು ಭಾರತದಲ್ಲಿ ತಯಾರಾದ ಸಣ್ಣ ನಾಟ್ ವಿಮಾನಗಳಿಗೆ ತುತ್ತಾದವು. ಅವರ ಟ್ಯಾಂಕುಗಳು ಭಾರತದ ವೈಜಯಂತಾ ಟ್ಯಾಂಕುಗಳೆದುರು ನಿಲ್ಲಲಾರದಾದವು. ಭಾರತದ ಶೂರ ಸೈನಿಕರು ಧೈರ್ಯೋತ್ಸಾಹದಿಂದ ಹೋರಾಡಿ ಪಾಕಿಸ್ತಾನದ ಸೈನ್ಯಪಡೆಗಳನ್ನು ಎರಡೂ ವಲಯಗಳಲ್ಲಿ ಸದೆಬಡಿದರು. ಪೂರ್ವಭಾಗದ

ಯುದ್ಧದಲ್ಲಿ ಪಾಕಿಸ್ತಾನದ ಒಂದು ವಿಮಾನವೂ ಉಳಿಯದಂತೆ ಶೋಧಿಸಿ ನಾಶಪಡಿಸಲಾಯಿತು. ಪೂರ್ವ ಪಾಕಿಸ್ತಾನದ ರಾಜಧಾನಿ ಡಾಕಾನಗರ ಭಾರತೀಯರಿಗೆ ವಶವಾಯಿತು. ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದಿದ್ದ ಎರಡೂ ವಲಯಗಳ ಸೇನೆಗಳು ಭಾರತ ಸೇನಾಧಿಕಾರಿಗಳಿಗೆ ನಿರ್ದಿಷ್ಟ ಅವಧಿಯಲ್ಲಿ ಶರಣಾಗತವಾದವು.

## ಮಾನವ ಹಿತೋತ್ಸಾಹ ದೃಷ್ಟಿ

ಬಂಗ್ಲಾದೇಶಕ್ಕೆ ಒದಗಿದ ವಿಪತ್ತನ್ನು ಪರಿಹರಿಸುವುದೇ ಶ್ರೀಮತಿ ಗಾಂಧಿಯವರ ಬಹು ಮುಖ್ಯ ಗುರಿಯಾಗಿತ್ತು. ಅಲ್ಲಿ ನಡೆಯುತ್ತಿದ್ದ ಮಾನವ ಹತ್ಯಾಕಾಂಡ ಮಾನವ ಹಿತೋತ್ಸಾಹಿಯಾದ ಅವರನ್ನು ತುಂಬ ಕೆರಳಿಸಿತ್ತು. ಮಾನವನ ಘನತೆಯನ್ನು ಕಾಪಾಡಲು ಅವರು ಈ ಪ್ರಕರಣದಲ್ಲಿ ಪ್ರವೇಶಿಸಬೇಕಾಯಿತಲ್ಲದೆ ಪಾಕಿಸ್ತಾನದ ಆಂತರಿಕ ವ್ಯವಹಾರಗಳಲ್ಲಿ ಕೈಹಾಕುವ ಉದ್ದೇಶ ಅವರದಾಗಿರಲಿಲ್ಲ. ಈ ಮಿತವಾದ ನಿರ್ದಿಷ್ಟ ಉದ್ದೇಶ ಫಲಿಸಿದ ಒಡನೆಯೇ ಶ್ರೀಮತಿ ಗಾಂಧಿಯವರು ಏಕಪಕ್ಷೀಯವಾಗಿ ಯುದ್ಧವಿರಾಮವನ್ನು ಘೋಷಿಸಿದರು. ಈ ೧೪ ದಿನಗಳ ಯುದ್ಧ ಪಾಕಿಸ್ತಾನಕ್ಕೆ ಯುದ್ಧದ ಹೆಸರೆತ್ತದಂತಹ ಪಾಠವನ್ನು ಕಲಿಸಿತು. ಬಂಗ್ಲಾದೇಶ ಸ್ವತಂತ್ರ ರಾಷ್ಟ್ರವಾಯಿತು.

## ದ್ವಿಪಕ್ಷೀಯ ಶೃಂಗ ಸಭೆ

ಯುದ್ಧದ ಅನಂತರ ಪಾಕಿಸ್ತಾನ–ಭಾರತಗಳ ನಡುವೆ ಶಾಂತಿ ಒಪ್ಪಂದದ ಮಧ್ಯಸ್ತಿಕೆಗೆ ಬರಲು ಪ್ರಬಲ ರಾಷ್ಟ್ರಗಳು ಮಾಡಿದ ಪ್ರಯತ್ನಗಳನ್ನು ಶ್ರೀಮತಿ ಗಾಂಧಿಯವರು ತಿರಸ್ಕರಿಸಿದರು. ಈ ಎರಡು ನೆರೆ ರಾಷ್ಟ್ರಗಳು ತಮ್ಮ ವಿವಾದಗಳನ್ನು ತಮ್ಮಲ್ಲಿ ಮಾತ್ರ ಇತ್ಯರ್ಥಗೊಳಿಸಿಕೊಳ್ಳಬೇಕೆಂಬುದು

ಅವರ ವಾದ. ಈ ವಾದಕ್ಕೆ ಪಾಕಿಸ್ತಾನದ ಅಧ್ಯಕ್ಷ ಭುಟ್ಟೋ ಅವರು ಮಣಿಯಬೇಕಾಯಿತು. ಈ ದಿಸೆಯಲ್ಲಿ ಇತ್ತೀಚೆಗೆ ದೆಹಲಿಯಲ್ಲಿ ನಡೆದ ಪ್ರಥಮ ಶೃಂಗಸಭೆ ಭಾರತ ಪಾಕಿಸ್ತಾನಗಳ ನಡುವೆ ಇಂದಿಗೆ ಇಪ್ಪತ್ತೈದು ವರ್ಷಗಳಿಂದಲೂ ಬೆಳೆದು ಬಂದಿರುವ ಹಗೆತನವನ್ನು ಕೊನೆಗಾಣಿಸುವ ಆಸೆಯನ್ನು ಹುಟ್ಟಿಸಿದೆ. ಈ ಆಸೆ ಫಲಿಸಿ ಇವೆರಡೂ ನೆರೆಹೊರೆಯ ರಾಷ್ಟ್ರಗಳಲ್ಲಿ ಕೊನೆಬಾಳಬಲ್ಲ ಶಾಂತಿ ಮತ್ತು ಪರಸ್ಪರ ಸಹಕಾರಗಳಿಂದ ಕೂಡಿದ ಸಹಜೀವನವೇರ್ಪಡುವ ಘನೋದ್ದೇಶ ಶ್ರೀಮತಿ ಗಾಂಧಿಯವರದಾಗಿದೆ.

## ಮಾನವ ಹಕ್ಕು-ಬಾಧ್ಯತೆಗಳ ರಕ್ಷಣೆ

ನೆಹರೂ ಭಾರತಕ್ಕೆ ವಿಶ್ವದಲ್ಲಿ ವಿಶ್ವಶಾಂತಿಗಾಗಿ ಹೋರಾಡುವ ನ್ಯಾಯಶೀಲ ರಾಷ್ಟ್ರವೆಂಬ ಮಾನ್ಯತೆ ಗಳಿಸಿಕೊಟ್ಟಿದ್ದರು. ಅವರ ಮಗಳು ಮಾನವನ ಹಕ್ಕು ಬಾಧ್ಯತೆಗಳನ್ನು ಯುದ್ಧಹೂಡಿಯಾದರೂ ಭಾರತ ರಕ್ಷಿಸುತ್ತದೆಯೆಂಬುದನ್ನು ತೋರಿಸಿದ್ದಾರೆ. ಪ್ರಬಲ ರಾಷ್ಟ್ರವಾದ ಅಮೇರಿಕಾ ದೇಶವನ್ನು ಎದುರು ಹಾಕಿಕೊಳ್ಳಲೂ ಹೆದರದೆ, ಅವರ ರಾಷ್ಟ್ರೀಯರಿಂದಲೇ ಅಮೇರಿಕೆಯ ಅಧ್ಯಕ್ಷ ನಿಕ್ಸನ್ನರ ಮುಖಭಂಗಗೊಳಿಸಿ-ತನ್ನ ಧ್ಯೇಯೋದ್ದೇಶಗಳನ್ನು ಸಾಧಿಸಿದ ಧೀಮಂತ ಸ್ತ್ರೀ ಶ್ರೀಮತಿ ಇಂದಿರಾ ಗಾಂಧಿ! ಭಾರತ ಸ್ತ್ರೀ ಅಬಲೆಯೆಂದು ಕರೆಯುವುದಕ್ಕಾದೀತೆ ?

# ಕರ್ನಾಟಕದ ಸಾಧನೆ ಮತ್ತು ಸಿದ್ಧಿ

೧೯೪೭ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದಮೇಲೆ, ದೇಶೀಯ ಸಂಸ್ಥಾನಗಳಿಗೆ ಆಂಗ್ಲರು ಕೊಟ್ಟ ಹಕ್ಕನ್ನು ಚಲಾಯಿಸಿ, ಮೈಸೂರು ಮಹಾರಾಜರು ಸ್ವತಂತ್ರರಾಗಿ ಉಳಿಯುವ ಆಶಯವನ್ನು ಹೊಂದಿದ್ದರು. ಮೈಸೂರು ಕಾಂಗ್ರೆಸ್ ನಾಯಕರು ಇದನ್ನು ಬಹಿರಂಗವಾಗಿ ಪ್ರತಿಭಟಿಸಿದರು. ವಿದ್ಯಾರ್ಥಿಗಳು ಜವಾಬ್ದಾರಿ ಸರಕಾರದ ಹೋರಾಟದಲ್ಲಿ ಧುಮುಕಿದರು. ಸೆಪ್ಟಂಬರ್ ೨೪, ೧೯೪೭ರಲ್ಲಿ ಜನರ ಮನವನ್ನು ಅರಿತ ಮಹಾರಾಜರು ಅವರ ಅಭಿಪ್ರಾಯಕ್ಕೆ ಸಮ್ಮತಿ ನೀಡಿದರು. ಅಕ್ಟೋಬರ್ ೧೧ರಂದು ಮೈಸೂರು ರಾಜ್ಯ ಕಾಂಗ್ರೆಸ್ಸಿನ ಅಧ್ಯಕ್ಷ ಕೆ. ಸಿ. ರೆಡ್ಡಿ ಮತ್ತು ದಿವಾನರೊಂದಿಗೆ ಒಪ್ಪಂದವಾಯಿತು. ಅಕ್ಟೋಬರ್ ೨೪ರಂದು ಕೆ. ಸಿ. ರೆಡ್ಡಿಯವರು ಮುಖ್ಯ ಮಂತ್ರಿಯಾಗಿ ಸಂಯುಕ್ತ ಸರಕಾರವನ್ನು ರಚಿಸಿದರು. ಮಹಾರಾಜರು ರಾಜಪ್ರಮುಖರಾದರು.

## 'ಮಾದರಿಯ ರಾಜ್ಯ'

ಮಹಾರಾಜರ ಜನಾದರಣೀಯ ಆಡಳಿತದ ಫಲವಾಗಿ ಮೈಸೂರು ರಾಜ್ಯ ವಿವಿಧ ಕ್ಷೇತ್ರಗಳಲ್ಲಿ "ಮಾದರಿಯ ರಾಜ್ಯ"ವೆಂದು ಭಾರತದಲ್ಲಿ ಹೆಸರು ಸಂಪಾದಿಸಿದ್ದಿತು. ಔದ್ಯೋಗಿಕ ಕ್ಷೇತ್ರದಲ್ಲಿ ಮಹತ್ತರವಾದ ಪ್ರಗತಿಯನ್ನು ಸಾಧಿಸಿತ್ತು. ನದಿಯ ನೀರನ್ನು ವಿದ್ಯುತ್ ಉತ್ಪಾದನೆಗಾಗಿ ಉಪಯೋಗಿಸುತ್ತಿದ್ದ ಪೌರ್ವಾತ್ಯ ರಾಜ್ಯಗಳಲ್ಲಿ ಮೈಸೂರು ಸಂಸ್ಥಾನ ಮೊದಲನೆಯದಾಗಿದ್ದಿತು. ಆದರೆ ರಾಜ್ಯ ಪುನರ್ವಿಂಗಡನೆಯಿಂದ ೧೯೫೬ರಲ್ಲಿ ಮಹಾರಾಷ್ಟ್ರ, ಹೈದರಾಬಾದ್, ಮತ್ತು ಮದ್ರಾಸ್ ರಾಜ್ಯಗಳಿಂದ ವಿಶಾಲ ಮೈಸೂರಿನಲ್ಲಿ ಸೇರ್ಪಡೆಯಾದ ಬಹು ಪಾಲು ಕನ್ನಡ ಜಿಲ್ಲೆಗಳು ಹಿಂದುಳಿದಿದ್ದು ಮೈಸೂರು

ರಾಜ್ಯ ಒಟ್ಟಾರೆ ಹಿಂದುಳಿದ ರಾಜ್ಯವೆಂದು ಪರಿಗಣಿಸಲ್ಪಟ್ಟಿತು. ಪ್ರಜಾ ಸರಕಾರ ಈ ಕೊರತೆಯನ್ನು ನೀಗಿಸಲು ಪ್ರಯತ್ನಿಸುತ್ತಿದೆ. ಕರ್ನಾಟಕ ಪಂಚವಾರ್ಷಿಕ ಯೋಜನೆಗಳ ಮೂಲಕ ಪ್ರಶಂಸನೀಯವಾದ ಪ್ರಗತಿಯನ್ನು ಸಾಧಿಸಿದೆ.

## ಬೇಸಾಯ

ಸಮಾಜದ ನ್ಯೂನತೆಗಳನ್ನು ತೊಡೆದು ಹಾಕುವುದರಲ್ಲಿ ಅರ್ಥಿಕಾಭಿವೃದ್ಧಿ ಆವಶ್ಯಕವೆಂದು ಅರಿತ ರಾಜ್ಯಗಳಲ್ಲಿ ಕರ್ನಾಟಕವೂ ಒಂದು. ಬೇಸಾಯದ ಬೆಳವಣಿಗೆ ಆರ್ಥಿಕ ಅಭಿವೃದ್ಧಿಗೆ ನಾಂದಿಯಾಗಿದೆ. ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿ ಕರ್ನಾಟಕ ಗೇಣಿದಾರ ಮತ್ತು ಸರಕಾರದ ಮಧ್ಯವರ್ತಿಯನ್ನು ತೊಡೆದು ಹಾಕಿದೆ. ಅಲ್ಲದೆ ಭೂಕಂದಾಯವನ್ನು ನಿವ್ವಳ ಆದಾಯದ ಕಾಲುಪಾಲು ಮತ್ತು ಅದಕ್ಕೂ ಕಮ್ಮಿಗೆ ಇಳಿಸಿದೆ. ಗೇಣಿದಾರನ ಹಕ್ಕನ್ನು ಮಾನ್ಯಮಾಡಲು ಅನೇಕ ಸುಧಾರಣೆಗಳನ್ನು ಜಾರಿಗೆ ತಂದಿದೆ. ಭೂ ಒಡೆತನದ ಗರಿಷ್ಠಮಿತಿಯನ್ನು ವಿಧಿಸುವ ಭೂಸುಧಾರಣೆ ವಿಧಾಯಕ ರಾಜ್ಯ ವಿಧಾನಸಭೆಯ ಮುಂದಿದೆ. ರೈತನಿಗೆ ಆಧುನಿಕ ವಿಜ್ಞಾನದ ಫಲವನ್ನು ಒದಗಿಸುವ ದಿಸೆಯಲ್ಲಿ ಹೆಬ್ಬಾಳದಲ್ಲಿರುವ ಕೃಷಿವಿಶ್ವವಿದ್ಯಾಲಯ ಶ್ರಮಿಸುತ್ತಿದೆ. ಆಹಾರ ಪದಾರ್ಥಗಳಲ್ಲಿ ಹೆಚ್ಚುವರಿ ಫಸಲು ನೀಡುವ ಅನೇಕ ಹೊಸ ತಳಿಗಳನ್ನು ಈ ಸಂಸ್ಥೆ ಕಂಡುಹಿಡಿದು ರೈತನು ತನ್ನ ಶ್ರಮಕ್ಕೆ ಸರಿಹೊಂದುವ ಲಾಭವನ್ನು ಗಳಿಸಲು ಅನುವುಮಾಡಿಕೊಟ್ಟಿದೆ. ಈ ಬೆಳವಣಿಗೆಯಿಂದಾಗಿ ಮೈಸೂರು ರಾಜ್ಯ ತನ್ನ ಜನತೆಯ ಆಹಾರದ ಪೂರೈಕೆ ಮಾಡಲು ತಕ್ಕಮಟ್ಟಿಗೆ ಸಾಧ್ಯವಾಗಿದೆ.

## ನೀರಾವರಿ

ಕರ್ನಾಟಕ ಕೈಕೊಂಡಿರುವ ಭಾರಿ ಹಾಗೂ ಸಣ್ಣ ಪ್ರಮಾಣದ ನೀರಾವರಿ ಕಾರ್ಯಗಳು ರಾಜ್ಯದ ಈ ಸಾಧನೆಗೆ ಬಹುಮಟ್ಟಿಗೆ ಕಾರಣ. ತುಂಗ,

ಮಲಪ್ರಭ, ಘಟಪ್ರಭ, ಭದ್ರಾ, ಕಾಳಿ, ಹಾರಂಗಿ, ಕೃಷ್ಣಾ ಹಾಗೂ ಕಾವೇರಿ ನದಿಗಳ ಯೋಜನೆಗಳು ರಾಜ್ಯದ 'ಹಸಿರು ಕ್ರಾಂತಿ'ಯನ್ನು ನನಸಾಗಿಸುವುದರಲ್ಲಿ ಸಂದೇಹವಿಲ್ಲ.

## ವಿದ್ಯುತ್ ಉತ್ಪಾದನೆ

ವಿದ್ಯುತ್ ಉತ್ಪಾದನೆಯಲ್ಲಿಯೂ ಸಹ ನಮ್ಮ ರಾಜ್ಯ ಸ್ವಾವಲಂಬಿಯಾಗಿದೆ. ಏಶಿಯದಲ್ಲಿಯೇ ಅತ್ಯಂತ ದೊಡ್ಡದಾದ ವಿದ್ಯುತ್ ಉತ್ಪಾದನಾ ಕೇಂದ್ರವಾದ ಶರಾವತಿ ಯೋಜನೆ ಕರ್ನಾಟಕದಲ್ಲಿರುವುದು ಹೆಮ್ಮೆಯ ವಿಚಾರ. ನಮ್ಮ ರಾಜ್ಯ ನೆರೆಹೊರೆಯ ರಾಜ್ಯಗಳಾದ ತಮಿಳು ನಾಡು, ಆಂಧ್ರಪ್ರದೇಶ, ಮಹಾರಾಷ್ಟ್ರ, ಗೋವಾಗಳಿಗೆ ವಿದ್ಯುತ್ತನ್ನು ನೀಡುತ್ತಿದೆ. ಮೇಲೆ ಉದಹರಿಸಿದ ಯೋಜನೆಗಳನ್ನು ನೀರಾವರಿ ಸೌಲಭ್ಯಗಳ ಜೊತೆಗೆ ವಿದ್ಯುತ್ ಉತ್ಪಾದನೆಗಾಗಿಯೂ ಉಪಯೋಗಿಸಿಕೊಂಡಲ್ಲಿ ಇನ್ನೂ ಕಾಲು ಶತಮಾನದವರೆಗೂ ಕರ್ನಾಟಕಕ್ಕೆ ವಿದ್ಯುತ್ ಕೊರತೆ ಉಂಟಾಗದು.

## ಕೈಗಾರಿಕಾ ಕ್ಷೇತ್ರ

ಕೈಗಾರಿಕಾ ಕ್ಷೇತ್ರದಲ್ಲಿಯೂ ಸಹ ಕರ್ನಾಟಕದ ಸಾಧನೆ ಮಿಗಿಲಾದುದಾಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಸ್ಥಾಪಿತವಾದ ಭದ್ರಾವತಿಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ, ಕಾಗದದ ಕಾರ್ಖಾನೆ ಮತ್ತು ಸಿಮೆಂಟ್ ಕಾರ್ಖಾನೆಗಳ ಜೊತೆಗೆ ಅನೇಕ ಉದ್ಯಮಗಳು ಸ್ಥಾಪಿತವಾಗಿವೆ. ಹೆಚ್ಚಿನ ಈ ಕಾರ್ಖಾನೆಗಳು ಬೆಂಗಳೂರಿನಲ್ಲಿವೆ. ಇವುಗಳಲ್ಲಿ ಮುಖ್ಯವಾದವು ಸರಕಾರದ ಸ್ವಾಮ್ಯದಲ್ಲಿರುವ ಟೆಲಿಫೋನ್, ವಿದ್ಯುದುಪಕರಣಗಳು, ಯಂತ್ರೋಪಕರಣ, ರೇಡಿಯೋ ಕಾರ್ಖಾನೆಗಳು, ಕೆನಡಾದ ಸಹಾಯದಿಂದ ಬೆಳಗಾವಿಯಲ್ಲಿ ಸ್ಥಾಪಿಸಿರುವ ಅಲ್ಯೂಮಿನಿಯಂ ಕಾರ್ಖಾನೆ; ಖಾಸಗೀ ಕ್ಷೇತ್ರದಲ್ಲಿರುವ

ಕಿರ್ಲೋಸ್ಕರ್, ಮೈಕೋ, ಮೈಸೂರಿನಲ್ಲಿರುವ ಸ್ಕೂಟರ್‌ಗಳನ್ನು ತಯಾರಿಸುವ ಕಾರ್ಖಾನೆಗಳು; ಅಮ್ಮಸಂದ್ರ ಮತ್ತು ಬಾಗಿಲುಕೋಟೆಗಳಲ್ಲಿರುವ ಸಿಮೆಂಟ್ ಕಾರ್ಖಾನೆಗಳು, ನಂಜನಗೂಡಿನಲ್ಲಿರುವ ಕಾಗದದ ಕಾರ್ಖಾನೆ ಇವು ಮುಖ್ಯವಾದುವು. ಸಕ್ಕರೆ ಉದ್ಯಮದಲ್ಲಿಯೂ ಸಹ ಕರ್ನಾಟಕ ದಿಟ್ಟ ಹೆಜ್ಜೆಯನ್ನು ಇಟ್ಟಿದೆ. ಈಗಾಗಲೇ ನಮ್ಮ ರಾಜ್ಯದಲ್ಲಿ ಸಹಕಾರಿ ಕ್ಷೇತ್ರದಲ್ಲಿರುವ ನಾಲ್ಕು ಕಾರ್ಖಾನೆಗಳೂ ಸೇರಿ ಒಟ್ಟು ಹತ್ತು ಕಾರ್ಖಾನೆಗಳಿವೆ. ಇನ್ನೂ ಆರು ಕಾರ್ಖಾನೆಗಳನ್ನು ಸ್ಥಾಪಿಸಲು ಸರಕಾರವು ಸತತವಾಗಿ ಪ್ರಯತ್ನಿಸುತ್ತಿದೆ.

ಕರ್ನಾಟಕದ ಹೆಮ್ಮೆಯ ವಸ್ತುಗಳಾದ ಗಂಧದ ಪದಾರ್ಥಗಳು, ಗಂಧದ ಎಣ್ಣೆ ಮತ್ತು ರೇಷ್ಮೆ ಸರಕುಗಳು ಭಾರತಕ್ಕೆ ಗಣನೀಯವಾದ ವಿದೇಶಿ ಹಣವನ್ನು ಗಳಿಸುತ್ತಿವೆ.

ಅಲ್ಲದೆ ಭೂಗತ ನಿಧಿ ನಿಕ್ಷೇಪಗಳ ಅನ್ವೇಷಣೆಯಲ್ಲಿ ರಾಜ್ಯದ ಭೂಗರ್ಭ ಶಾಖೆ ಶ್ರಮಿಸುತ್ತಿದೆ. ಕೋಲಾರದ ಚಿನ್ನದ ಗಣಿಗಳ ಜೊತೆಗೆ ರಾಯಚೂರು ಜಿಲ್ಲೆಯ ಹಟ್ಟಿ ಚಿನ್ನದ ಗಣಿ ಚಿನ್ನದ ಉತ್ಪಾದನೆಯಲ್ಲಿ ಪಾಲ್ಗೊಂಡಿದೆ. ಕಬ್ಬಿಣ, ಮ್ಯಾಂಗನೀಸ್ ಅದಿರನ್ನು ರಾಜ್ಯ ಪರದೇಶಗಳಿಗೆ ರಫ್ತು ಮಾಡುತ್ತಿದೆ. ವಿಜಯನಗರದಲ್ಲಿ (ಹೊಸಪೇಟೆ) ಸ್ಥಾಪಿಸಲು ಯೋಜಿಸಿರುವ ಉಕ್ಕಿನ ಕಾರ್ಖಾನೆ ರಾಜ್ಯದ ಉಕ್ಕಿನ ಕೊರತೆಯನ್ನು ಬಹು ಪಾಲು ನೀಗಿಸುತ್ತದೆ. ಅಲ್ಲದೆ ಕುದುರೆಮುಖ ಯೋಜನೆ ಕಾರ್ಯರೂಪಕ್ಕೆ ಬಂದಮೇಲೆ ತಾಮ್ರ ಲೋಹದ ಕೊರತೆಯನ್ನು ತಪ್ಪಿಸಲು ಸಾಧ್ಯವಾಗುತ್ತದೆ.

### ಸಾರಿಗೆ–ಸಂಪರ್ಕ

ಮಿಗಿಲಾಗಿ ಸಾರಿಗೆ ಸಂಪರ್ಕದ ದಿಸೆಯಲ್ಲಿಯೂ ಸಹ ಏಕೀಕೃತ ಕರ್ನಾಟಕದ ಸಾಧನೆ ಗಣನೀಯ ಪ್ರಮಾಣದಲ್ಲಾಗಿದೆ. ಹೆದ್ದಾರಿಗಳ ಸಾರಿಗೆ

ವ್ಯವಸ್ಥೆಯನ್ನು ಸರಕಾರ ವಹಿಸಿಕೊಂಡಿದೆ. ಪಶ್ಚಿಮ ಕರಾವಳಿಯಲ್ಲಿ ಸಮುದ್ರ ವ್ಯಾಪಾರಕ್ಕೆ ಅನುಕೂಲವಾಗಲು ಮಲ್ಪೆ, ಮಂಗಳೂರು ಮೊದಲಾದ ಎಡೆಗಳಲ್ಲಿ ಬಂದರು ಕಾರ್ಯ ತ್ವರಿತ ಗತಿಯಿಂದ ನಡೆಯುತ್ತಿದೆ.

## ಶಿಕ್ಷಣ

ವಿದ್ಯಾಕ್ಷೇತ್ರದಲ್ಲಿಯೂ ನಮ್ಮ ಜನತಾ ಸರಕಾರ ಮಹತ್ತರ ಸಾಧನೆಗಳನ್ನು ಗಳಿಸಿದೆ. ಪ್ರೌಢವಿದ್ಯಾಭ್ಯಾಸದವರೆಗೆ ಸರಕಾರವು ಜನತೆಗೆ ವಿದ್ಯಾಭ್ಯಾಸವನ್ನು ಪುಕ್ಕಟೆಯಾಗಿ ಒದಗಿಸುತ್ತಿದೆ. ಸುಮಾರು ಎರಡು ಲಕ್ಷಕ್ಕೂ ಮೀರಿದಂತೆ ವಿದ್ಯಾರ್ಥಿಗಳು ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಕೂರುತ್ತಿದ್ದಾರೆ. ಈ ಸಂಖ್ಯಾ ಪ್ರಮಾಣ ಒಂದು ಮಹತ್ತರವಾದ ಸಾಧನೆ ಎಂದರೆ ಬಹುಶಃ ತಪ್ಪಾಗಲಾರದು. ಜನತೆಯ ಉಚ್ಚ ಶಿಕ್ಷಣಕ್ಕಾಗಿ ಬೆಂಗಳೂರಿನಲ್ಲಿ ೧೯೬೪ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯವು ಸ್ಥಾಪಿತವಾಯಿತು. ಬೆಂಗಳೂರಿನ ಈ ದೊಡ್ಡ ಬೆಳವಣಿಗೆ ಭಾರತದಲ್ಲಿ ದೆಹಲಿಗೆ ಮಾತ್ರ ಸರಿಹೊಂದುತ್ತದೆ. ಇಲ್ಲಿಯ ನಾಗರಿಕರ ವಿದ್ಯಾಕಾಂಕ್ಷೆಯನ್ನು ಈ ವಿಶ್ವವಿದ್ಯಾಲಯ ಪೂರೈಸುತ್ತದೆ. ಅಲ್ಲದೆ ಧಾರವಾಡದಲ್ಲಿರುವ ಕರ್ನಾಟಕ ವಿಶ್ವವಿದ್ಯಾಲಯ, ಮೈಸೂರಿನಲ್ಲಿರುವ ಮೈಸೂರು ವಿಶ್ವವಿದ್ಯಾಲಯ ಇವು ಉಚ್ಚ ಶಿಕ್ಷಣದ ಮುಖ್ಯ ಕೇಂದ್ರಗಳಾಗಿವೆ.

## ಹರಿಜನ–ಗಿರಿಜನ ಪ್ರಗತಿ

ಕರ್ನಾಟಕ ಹರಿಜನ ಹಾಗೂ ಗಿರಿಜನರ ಅಭಿವೃದ್ಧಿಗೆ ಹೆಚ್ಚು ಗಮನ ನೀಡುತ್ತಿರುವುದು ಸ್ವಾಗತಾರ್ಹವಾಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿಯೂ ಸಹ ಹರಿಜನರಿಗೆ ಪ್ರತ್ಯೇಕ ಶಾಲೆಗಳಿದ್ದವು. ಮೊದಲನೆಯ ಪಂಚವಾರ್ಷಿಕ ಯೋಜನೆಯಲ್ಲಿ ಗಿರಿಜನರ ಅಭಿವೃದ್ಧಿಗಾಗಿ ಎರಡು ಕ್ಷೇತ್ರಗಳನ್ನು ಆರಿಸಲಾಯಿತು.

ಚಿಕ್ಕಮಗಳೂರು ತಾಲ್ಲೂಕಿನ ಬೂದಿಬಡಗ, ಹೆಗ್ಗಡದೇವನಕೋಟೆ ತಾಲ್ಲೂಕಿನ ಪೆಂಜಹಳ್ಳಿ ಇವೇ ಆ ಎರಡು ಕ್ಷೇತ್ರಗಳು. ಹರಿಜನ ಗಿರಿಜನರ ಕಲ್ಯಾಣಕ್ಕಾಗಿ ಹಲವು ಕೋಟಿ ರೂಪಾಯಿಗಳನ್ನು ಒದಗಿಸಲಾಯಿತು. ಈ ವರ್ಗದವರ ವಿದ್ಯಾಭ್ಯಾಸಕ್ಕಾಗಿ ಸರಕಾರ ಎಲ್ಲಾ ಸೌಲಭ್ಯಗಳನ್ನೂ ಕಲ್ಪಿಸಿದೆ.

ಮೈಸೂರು ಮಹಾರಾಜರ ಮನೆತನಕ್ಕೆ ಸೇರಿದ ದೇವರಾಜ ಅರಸು ಸರಳ, ನಿರಾಡಂಬರ ವ್ಯಕ್ತಿ. ಗಾಂಧಿಯುವರ ಚಳವಳಿಗಳಲ್ಲಿ ತಾರುಣ್ಯದಲ್ಲಿಯೇ ಪಾಲ್ಗೊಂಡು, ಭಾರತದ ಸ್ವಾತಂತ್ರ್ಯ ಸಮರಗಳಲ್ಲಿ ಹೋರಾಡಿದವರು. ಈಗ ಮೈಸೂರಿನ ಮುಖ್ಯಮಂತ್ರಿಯಾಗಿದ್ದಾರೆ. ದೀನದಲಿತರ ಉದ್ಧಾರಕ್ಕಾಗಿ ಪಣತೊಟ್ಟು, ಕಾರ್ಯಶೀಲರಾಗಿದ್ದಾರೆ. ಉಳುವವನಿಗೇ ನೆಲ, ಭೂಹಿಡುವಳಿಯಲ್ಲಿ ಮಿತಿ—ಈ ಮುಂತಾದ ಯೋಜನೆಗಳನ್ನು ಶೀಘ್ರವಾಗಿ ಕಾರ್ಯಗತಮಾಡಲು ಶ್ರಮಿಸುತ್ತ, ಸಮಾಜವಾದೀ ಆರ್ಥಿಕ ವ್ಯವಸ್ಥೆಯನ್ನು ರೂಪಿಸಲು ಆಸಕ್ತರಾಗಿದ್ದಾರೆ. ಸರ್ವತೋಮುಖವಾಗಿ ಮೈಸೂರಿನ ಪ್ರಗತಿಗಾಗಿಯೂ, ಆರ್ಥಿಕ ಅಭಿವೃದ್ಧಿಗಾಗಿಯೂ ಹಾತೊರೆಯುತ್ತಿದ್ದಾರೆ.

ಎ. ಆರ್. ಬದರೀನಾರಾಯಣರು ಗಾಂಧಿಯುವರ ನೇತೃತ್ವದಲ್ಲಿ ನಡೆದ ಸ್ವಾತಂತ್ರ್ಯ ಚಳವಳಿಗಳಲ್ಲಿ ಭಾಗವಹಿಸಿ, ಹಲವು ಬಾರಿ ಸೆರೆಮನೆವಾಸವನ್ನು ಅನುಭವಿಸಿದವರು. ಅವರ ಜನ್ಮಸ್ಥಳವಾದ ಮಲೆನಾಡಿನ ಪ್ರಗತಿಗಾಗಿ ಸದಾ ಶ್ರಮಿಸಿದವರು. ಹಲವು ಪ್ರಬುದ್ಧ, ಪ್ರಗತಿಶೀಲ ವಿದ್ಯಾ ಸಂಸ್ಥೆಗಳನ್ನು ಕಟ್ಟಿ, ಅವುಗಳ ಜೀವವಾಗಿದ್ದವರು. ಸಾಮಾಜಿಕ, ರಾಜಕೀಯರಂಗಗಳಲ್ಲಿ ಜನತಾ ಸೇವೆ ಸಲ್ಲಿಸಿದವರು. ಸಜ್ಜನಿಕೆ, ಸಹಾಯಬುದ್ಧಿಗಳಿಗಾಗಿ ಹೆಸರಾದವರು. ದೊಡ್ಡ ಜಮೀನುದಾರರಾಗಿದ್ದರೂ ಭೂ ಹಿ ಡು ವ ಳಿ ಯ ಮಿತಿಯನ್ನು ಸದಾ ಆಹ್ವಾನಿಸುತ್ತಿದ್ದವರು. ಈಗ ಮೈಸೂರಿನ ವಿದ್ಯಾಮಂತ್ರಿಯಾಗಿದ್ದಾರೆ. ಮೈಸೂರು ಸರಕಾರದ ಆದಾಯದ ಕಾಲುಭಾಗ ಹಣ ವಿದ್ಯಾಪ್ರಸಾರಕ್ಕೇ ವಿನಿಯೋಗವಾಗುತ್ತಿದ್ದರೂ, ಅದರಿಂದ ಜನತೆಗೆ



ಶ್ರೀ ಬದರೀನಾರಾಯಣ್

ಸಾಕಷ್ಟು ಪ್ರತಿಫಲ ದೊರೆಯುತ್ತಿಲ್ಲವೆಂಬುದನ್ನು ಗಮನಿಸಿ, ವಿದ್ಯಾ ಇಲಾಖೆ ಎಲ್ಲ ರೀತಿಗಳಲ್ಲೂ ಉತ್ತಮಗೊಳ್ಳಬೇಕೆಂದು ಶ್ರಮಿಸುತ್ತಿದ್ದಾರೆ.

ಅನೇಕ ತೊಡರುಗಳಿದ್ದಾಗಲೂ ನಮ್ಮ ರಾಜ್ಯ ಈ ಇಪ್ಪತ್ತೈದು ವರುಷಗಳಲ್ಲಿ ಮಾಡಿರುವ ಸಾಧನೆ, ರಾಜ್ಯದ ವಿಸ್ತಾರ ಹಾಗೂ ಹಿಂದುಳಿದ ಪ್ರದೇಶಗಳನ್ನು ಗಮನಿಸಿದರೆ, ಗಮನಾರ್ಹವಾಗಿದೆ. ಸ್ವಾವಲಂಬನೆಯ ಹಾಗೂ ಸಮಾಜವಾದದ ಗಾಳಿ ರಾಜ್ಯದಲ್ಲಿ ಹಿಂದೆಂದೂ ಬೀಸದಷ್ಟು ಜೋರಾಗಿ ಬೀಸುತ್ತಿದೆ. ನಾವು ಚಿನ್ನದ ಹಬ್ಬ ಆಚರಿಸುವ ಸಮಯಕ್ಕೆ ಈ ನಮ್ಮ ಹೆಮ್ಮೆಯ ಕರ್ನಾಟಕವನ್ನು ಭಾರತದ ಒಂದು ಮಾದರಿಯ ರಾಜ್ಯವನ್ನಾಗಿ ಮಾಡುವ ಪಣವನ್ನು ಈ ಬೆಳ್ಳಿ ಹಬ್ಬದ ಸುಸಮಯದಲ್ಲಿ ತೊಡೋಣ.

# ಗ್ರಂಥಋಣ

1. History and Culture of the Indian People (A Bharatiya Vidya Bhavan Publication) Vols. IX & X.

2. Renaissance, Nationalism and Social Changes in Modern India.
   K. K. DATTA.

3. Makers of Modern India.

4. The Indian war of Independence 1857
   V. D. SAVARKAR.

5. Freedom Movement in Karnataka, Vols. I & II.
   Ed. DR. M. V. KRISHNA RAO.
   G. S. HALAPPA.

6. Karnataka Darshana (Volume presented to
   Sri. R. R. Diwakar.)

7. ಭಾರತೀಯ ಸಂಸ್ಕೃತಿಯ ಸಮೀಕ್ಷೆ
   DR. H. V. S.
   DR. S. U. KAMATH.

8. ವಿಕ್ರಾಂತ ಭಾರತ—
   ತೀ. ತಾ. ಶರ್ಮ.

9. ಸ್ವಾತಂತ್ರ್ಯಯುದ್ಧ ೧೮೫೭—
   ರಂಗನಾಥ ದಿವಾಕರ.

# ಒಪ್ಪೋಲೆ

| ತಪ್ಪು | ಪುಟ | ಪಂಕ್ತಿ | ಒಪ್ಪು |
|---|---|---|---|
| ಮಾಡಿಸಿದ್ದಾರೆ | ಬೆಳ್ಳಿ ಹಬ್ಬದ ಪ್ರಮಾಣ ವಚನದಲ್ಲಿ | ೫ | ಮೂಡಿಸಿದ್ದಾರೆ |
| ಪುನರ್ಪರಿಸಿದರು | ii | ೧೮ | ಪುನಃಪರಿಸಿದರು |
| ೧೯೪೭ | ೮೧ | ೪ | ೧೯೪೨ |
| ತೇಜಿಸ್ವೀ | ೮೫ | ೧೩ | ತೇಜಸ್ವೀ |
| ಆಂದೋಲನ | ೮೫ | ೨೦ | ಆಂದೋಲನ |
| ಹಾಗಲ್ಲು | ೮೯ | ೧ | ಹಾನುಗಲ್ಲು |
| ನೈತಿಕ, ಆಚರಣೆ | ೯೧ | ೧೧ | ನೈತಿಕ ಆಚರಣೆ |
| ಶಿಕ್ಷಕ | ೯೨ | ೧ | ಶಿಕ್ಷಣ |
| ದಾಂಡೀಯಾತ್ರೆಯಲ್ಲಿ, ಅನಂತರ— | ೯೩ | ೧೪ | ದಾಂಡೀಯಾತ್ರೆಯಲ್ಲಿ. ಅನಂತರ |
| ತೊಗಿದ್ದಾರೆ | ೯೭ | ೯ | ತೊಡಗಿದ್ದಾರೆ |
| ಆಕ್ಷಾಂತರ | ೧೦೧ | ೧೭ | ಲಕ್ಷಾಂತರ |
| ಸಂದೇಶ, ಭಾಷಣ | ೧೦೨ | ೫ | ಸಂದೇಶ ಭಾಷಣ |
| ಸೇರಿಸುವ | ೧೦೪ | [illegible] | ಸೇರಿಸುವುದು |
| ಅವಶ್ಯಕವಾದ | ೧೧೩ | ೭ | ಆವಶ್ಯಕವಾದ |
| ಜಾತ್ಯಾತೀತ | ೧೧೪ | [illegible] | ಜಾತ್ಯತೀತ |

